# ಸಿದ್ಧಗಂಗಾ

ಸಂಪುಟ-೨೨ ಸಂಚಿಕೆ-೫ ಮೇ ೧೯೮೬

## ಶ್ರೀ ಸಿದ್ಧಗಂಗಾ ಗುರುಕರಣ ತ್ರಿವಿಧಿ

ಗುರು ಲಿಂಗ ಜಂಗಮವಾಗಿ ನೀ ಅರಳಿದೆ
ತ್ರಿವಿಧ ದಾಸೋಹ ನಡೆಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

* * *

ಚೆಂಗಾವಿಯು ಉಡುಗೆ ಕಂಗಳಿಗೆ ಬಲು ಸೊಬಗಂ
ಲಿಂಗಕ್ಕೊಪ್ಪುವುದು ನಿಮ್ಮ ನಡಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

* * *

ನೀನು ಮೆಟ್ಟಿದ ಧರೆ ಪರಮ ಪಾವನ ತಂದೆ
ನೀನು ಆಡಿದ ಮಾತು ಶುಭ ಮಂತ್ರ। ನನ್ನ ತಂದೆ
ಸಿದ್ಧಗಂಗಾ ಗರುವೆ ಕೃಪೆಯಾಗು॥

—ಹೆಚ್.ಎ. ವೀರಭದ್ರಯ್ಯ

# ಸಿದ್ಧಗಂಗಾಂತರಂಗ

# ಶ್ರೀವಾಣಿ

ಜೀವನದಲ್ಲಿ ಅತ್ಯಂತ ಮಹತ್ವವೆನಿಸಿರುವ ಸುಖದ ಕಲ್ಪನೆಯಲ್ಲಿ ಮನುಷ್ಯ ಭ್ರಮಿತನಾಗಿದ್ದಾನೆ. ಶಾಶ್ವತ ಸುಖವೆಂದರೇನು ? ಆ ಬಗೆಗೆ ಯೋಚಿಸಿ ಆ ಸುಖಪ್ರದ ಕಾರ್ಯರಂಗದಲ್ಲಿ ಮನಸ್ಸು ವ್ಯವಸಾಯ ಮಾಡುತ್ತಿಲ್ಲ. ಆದುದರಿಂದ ಮನೋದೌರ್ಬಲ್ಯವುಂಟಾಗಿ ದುರ್ಮಾರ್ಗ ಪ್ರವೃತ್ತಿ ಹೆಚ್ಚಾಗುತ್ತ ನಡೆದಿದೆ. ಯಾವ ಮಾರ್ಗದಲ್ಲಿ ಮನಸ್ಸು ಹರಿಸಬೇಕೋ ಆ ಮಾರ್ಗದಲ್ಲಿ ಹರಿಸುತ್ತಿಲ್ಲ. ಮಾನಸಿಕ ತಪಸ್ಸು ನಡೆಯದಿದ್ದರೆ ಅದಕ್ಕೆ ಶಕ್ತಿ ಬರುವುದಿಲ್ಲ. ಗೀತೆಯಲ್ಲಿ—

ಮನಃ ಪ್ರಸಾದ ಸೌಮ್ಯತ್ವಂ ಮೌನಮಾತ್ಮ ವಿನಿಗ್ರಹಃ।
ಭಾವ ಸಂಶುದ್ಧಿರಿತ್ಯೇತತ್ ತಪೋ ಮಾನಸ ಮುಚ್ಯತೇ॥

ಎಂದು ಹೇಳಲಾಗಿದೆ. ತಿಳಿಯಾದ ಮನಸ್ಸು ಒಳ್ಳೆಯದನ್ನೇ ಚಿಂತಿಸುವುದು. ಹೆಚ್ಚು ಮಾತನಾಡದಿರುವುದು. ಬಿಗಿಹಿಡಿಯುವುದು. ವಂಚನೆಯಿಲ್ಲದಿರುವುದು. ಇವು ಮನಸ್ಸಿನ ತಪಸ್ಸುಗಳಾಗಿವೆ. ಶಿವಶರಣರ ಜೀವನ ಸಮೃದ್ಧಿಯಾದ ಜೀವನ; ಕಾಯಸ್ಥ ಪರಶಿವನನ್ನುದ್ದೇಶಿಸಿ ಮಾಡತಕ್ಕ ಕಾಯಕದ ಸುಖದ ನಿಬ್ಬೆರಗಿನಲ್ಲಿ ಬಡತನ ಶ್ರೀಮಂತಿಕೆಯ ಶಬ್ದಗಳಿಗೆ ಅವರ ನಿಘಂಟುವಿನಲ್ಲಿ ಒಂದೇ ಅರ್ಥ. ಅವರು ಸತ್ಯಶುದ್ಧ ಕಾಯಕದವರು. ಉದ್ಯೋಗಶೀಲರು; ಕಾಯಕ ಸುಖವೇ ಕೈಲಾಸ ಸುಖವೆಂದು ನಂಬಿ ನುಡಿದು ನಡೆದವರು. ತನಗಾಗಿ ಮತ್ತೊಬ್ಬರನ್ನು ಬೇಡುವುದು ಮಹಾಪರಾಧವೆಂದೇ ಎಣಿಸುತ್ತಿದ್ದರು. ಅವರು ಸ್ವಾವಲಂಬನ ಮಾರ್ಗ, ಆರ್ಥಿಕ ಸಮಾನತೆಯೇ ಮೊದಲಾದ ಸುಂದರ ತತ್ವವರಿತು ಕೆಲಸಮಾಡಿ ಜನತೆಯಲ್ಲಿ ಸಮಾನತೆ ಶಾಂತಿ ಸಮೃದ್ಧಿ ಜೀವನವನ್ನುಂಟು ಮಾಡಲು ಹೆಣಗಿದದು ಅವರ ನುಡಿದ ವಚನರಾಶಿಯಲ್ಲಿ ಮಡುಗಟ್ಟನಿಂತಿದೆ.

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲುವವರು
ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ"

ಎಂದು ಬಸವಣ್ಣನವರು ಜಗತ್ತಿಗೆ ಸಾರಿದರು. ಈ ಜಗತ್ತೆಲ್ಲವೂ ಒಂದು ನಾಣ್ಯ ಮುದ್ರಣ ಶಾಲೆ. ಇಲ್ಲಿ ನಾವು "ಖೋಟಾ" ನಾಣ್ಯಗಳಾಗಬಾರದು. ಇಲ್ಲಿ "ಖೋಟಾ" ನಾಣ್ಯಗಳಾದರೆ ಅಲ್ಲಿಯೂ ಅದೇ ಗತಿ. ಮಾನವ ಕೋಟಿಯ ಪರಮ ಲಕ್ಷ್ಯ ದಿವ್ಯ ಜ್ಯೋತಿ ಸಂದರ್ಶನ. ಆ ತತ್ವ ಯಾವ ಒಂದು ಪಂಗಡದ್ದಲ್ಲ. ಆ ತತ್ವವನ್ನು ಎಲ್ಲ ಜನಾಂಗವೂ ಸತ್ಯಮಾರ್ಗಾಚರಣೆಯಿಂದಲೂ, ಶಾಸ್ತ್ರಮಾರ್ಗವಿಡಿದು ಆಚರಣೆಮಾಡುವದರಿಂದಲೂ, ದಿವ್ಯ ಜ್ಞಾನಿಗಳ ಬೋಧನೆಯಿಂದಲೂ, ಸ್ವಾನುಭವದ ಒರೆಗಲ್ಲಿಗೆ ಹಚ್ಚಿ ನೋಡುವುದರ ಮೂಲಕವೂ ಪಡೆದು ಅರಿತು ಆಚರಿಸಬೇಕು.

"ಸಿದ್ಧಗಂಗಾ" ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ|| ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಸಿ. ಎನ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡ ಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜ ನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗ ತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿ ಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶ ವಿಲ್ಲ. ಅನುವಾದ, ರೂಪಾಂತರ ಲೇಖನ ಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರ ರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

## ಎತ್ತ ಸಾಗಿದ್ದೇವೆ—

"ಕಿರಾತರು ಹುಟ್ಟಿ ಪುರಾತರು ಅಡಗಿದರು." ಚೆನ್ನಬಸವಣ್ಣನವರ ವಾಣಿ. ಜೀವನದ ಯಾವ ರಂಗದತ್ತ ಕಣ್ಣಾಡಿಸಿದರೂ ಈ ಮಾತಿನ ಸತ್ಯ ಅಪ್ಪಳಿಸುತ್ತದೆ. ಧರ್ಮ, ಸಮಾಜ, ರಾಜಕೀಯ, ಶಿಕ್ಷಣ, ಕಲೆ, ವಿಜ್ಞಾನ ಯಾವುದನ್ನೇ ಉದಾಹರಣೆಯನ್ನಾಗಿ ಕೊಡಬಹುದಾಗಿದೆ. ಮನುಷ್ಯ ಮನುಷ್ಯನಾಗುವುದನ್ನೇ ಮರೆಯುತ್ತಿದ್ದಾನೆ. ಬುದ್ಧಿ ಭಾವಗಳೆರಡೂ ಸಮಸಮವಾಗಿ ಹದವರಿತು ಒಡಬೆರೆತಾಗ ಮಾನವೀಯತೆಯ ಸೌರಭ ಘಮಘಮಿಸಿತು! ಆದರೆ ಇಂದು ಬುದ್ಧಿಯೊಂದೇ, ಮನುಷ್ಯನ ಸರ್ವ ಸಂಪತ್ತು ಎನಿಸುತ್ತಿದೆ. ಹೃದಯಕ್ಕೆ, ಭಾವನೆಗಳಿಗೆ ಕೆಲ ಮಾತ್ರ ಬೆಲೆಯಿಲ್ಲ. ನಾವೇ ರೂಪಿಸಿಕೊಂಡ ತತ್ವಗಳಿಗೆ ನಾವು ಬದ್ಧರಾಗುತ್ತಿಲ್ಲ. ಉದಾಹರಣೆಗೆ ಬೆಳಗಾವಿಯ ಮೇಲೆ ಮಹಾರಾಷ್ಟ್ರೀಯರು ನಡೆಸಿರುವ ಮೊಂಡುವಾದ, ಮಹಾಜನ್ ಆಯೋಗ ಬೇಕೆಂದು ಹಟಹಿಡಿದವರು ಮಹಾರಾಷ್ಟ್ರದವರೇ. ಆಯೋಗ ಕೊಟ್ಟ ವರದಿ ತಮ್ಮ ಮೂಗಿನ ನೇರಕ್ಕಿಲ್ಲವೆಂದು ಚಂಡಿ ಹಿಡಿದವರೂ ಅವರೇ. ಶ್ರೀ ಶರದ್ ಪವಾರ್ ಆಗಲಿ, ಶ್ರೀ ಎಸ್ ಎಂ ಜೋಷಿಯವರಾಗಲಿ, ಅನನುಭವಿಗಳೇನಲ್ಲ, ರಾಜಕೀಯದಲ್ಲಿ ನುರಿತವರು, ರಾಷ್ಟ್ರಮಟ್ಟದ ಮುಖಂಡರೆನಿಸಿಕೊಂಡವರು ರಾಷ್ಟ್ರಜೀವನದ ಹಿತಕ್ಕಾಗಿ ಶ್ರಮಿಸಬೇಕಾದದ್ದು ಅವರ ಧರ್ಮ. ಆದರೆ ಅವರೇ ಸತ್ಯಾಗ್ರಹ, ಚಳುವಳಿಗಳ ಪಂಜು ಹಿಡಿದು ಹೊರಟಿರುವುದು ನಿಜಕ್ಕೂ ವ್ಯಸನಕರ. ಪ್ರಧಾನಿ ರಾಜೀವಗಾಂಧಿಯವರು ತುಂಬುಗಾಂಭೀರ್ಯದ ಮಾತನಾಡಿದ್ದಾರೆ. ನಾವೇ ನೇಮಿಸುವ ಆಯೋಗಗಳ ಬಗ್ಗೆ ನಮಗೇ ಪ್ರಾಮುಖ್ಯತೆ ಇಲ್ಲದೇ ಹೋದರೆ ಹೇಗೆ? ಎಂದಿದ್ದಾರೆ. ಮಹಾಜನ್‌ರವರು ನ್ಯಾಯಾಧೀಶರಾಗಿದ್ದವರು. ಸಾಕಷ್ಟು ಪೂರ್ವಾಪರಗಳನ್ನು ವಿಚಾರ ಮಾಡಿಯೇ ತಮ್ಮ ವರದಿಯನ್ನು ನೀಡಿದರು. ಅದನ್ನೀಗ ಒಪ್ಪಿಕೊಳ್ಳುವುದದೊಂದೇ ಇರುವ ಏಕೈಕ ಮಾರ್ಗ. ಅದನ್ನು ಬಿಟ್ಟು ಭಾಷೆಯಂಥ ಭಾವುಕ ವಿಷಯವನ್ನು ಉದ್ರೇಕ, ಉದ್ವೇಗಗಳಿಗೆ ಸಾಧನವಾಗಿಸುತ್ತ ಜನಜೀವನವನ್ನು ಕಲಕುವ, ರಾಡಿಗೊಳಿಸುವ ರಾಜಕೀಯ ಸಲ್ಲದು. ಇದನ್ನು ಸಂಬಂಧಪಟ್ಟವರು ಅರಿತಷ್ಟೂ ಒಳ್ಳೆಯದು. ಮಾನ್ಯ ರಾಮಕೃಷ್ಣ ಹೆಗ್ಡೆಯವರು ಆಹ್ವಾನಕ್ಕೆ ಶ್ರೀ ಶರದ್ ಪವರ್, ಶ್ರೀ ಜೋಷಿಯವರು ಷರತ್ತು ಹಾಕಿರುವುದಂತೂ ಮುತ್ಸದ್ದಿಗಳ ಹಿರಿತನವಲ್ಲ. ಪ್ರೀತಿ ವಿಶ್ವಾಸಗಳು ಕೇವಲ ವ್ಯಕ್ತಿಮಟ್ಟದಲ್ಲೇ ನಿಲ್ಲಬೇಕಿಲ್ಲ; ರಾಜ್ಯಮಟ್ಟಕ್ಕೂ ಹಬ್ಬಬೇಕು. ಅಂಥ ಪ್ರಯತ್ನ ಮುಖಂಡರು ಮಾಡಬೇಕು. ಅದು ಚಿರಂತನ; ಅದೇ ರಾಷ್ಟ್ರಸೇವೆ.

—ಟಿ. ಆರ್. ಮಹದೇವಯ

## ಇಂಗಿತಜ್ಞತೆ—2

ಇಂಗಿತಜ್ಞತೆಯೆಂದರೆ ಬೇರೆಯವರ ಅಭಿಪ್ರಾಯಗಳನ್ನು, ಆಶಯಗಳನ್ನು ಊಹಿಸಿ ತಿಳಿದು ಕೊಳ್ಳುವ ಸಾಮರ್ಥ್ಯ, ಒಬ್ಬರು ಇನ್ನೊಬ್ಬರನ್ನು ಅರಿತು ಬಾಳಲು ಈ ಗುಣ ಅತ್ಯಗತ್ಯ. ಎಲ್ಲವನ್ನೂ ನಾವು ಹೇಳಿ ಮಾಡಿಸಲಾಗುವುದಿಲ್ಲ. ಕೆಲವು ವಿಚಾರಗಳನ್ನು ಹೇಳದಿದ್ದರೂ, ಅರಿತು ಮಾಡಬೇಕಾಗುತ್ತದೆ. ನಾವು ಉಸಿರಾಡು ವುದನ್ನು ಯಾರು ನಮಗೆ ಹೇಳಿಕೊಟ್ಟರು? ಬಾಯಾರಿದಾಗ ನೀರು ಕುಡಿಸುವುದಾ ಗಲೀ, ಹಸಿವಾದಾಗ ಉಣ್ಣುವುದಾಗಲೀ ಎಷ್ಟು ಸಹಜ ಕ್ರಿಯೆಯೋ ಹಾಗೆ ಇನ್ನೊ ಬ್ಬರ ಮನದ ಜಾಡನ್ನು ಅರಿತು ಅದರಂತೆ ನಡೆದು ಕೊಳ್ಳುವುದೂ ಸಹ ಮೈಗೂಡ ಬೇಕು. ಇದರಿಂದ ಬಾಳು ಸುಮುಖವಾಗುತ್ತದೆ.

ಹೇಳಿದರೆ ಮಾತ್ರ ತಿಳಿದು ಕೊಳ್ಳುವವರು, ಹೇಳದಿದ್ದರೂ ತಿಳಿದು ಕೊಳ್ಳುವ ವರು, ಹೇಳಿದರೂ, ಕಣ್ಣಾರೆ ಕಂಡರೂ ತಿಳಿದು ಕೊಳ್ಳಲಾಗದವರು ಎಂದು ಮುಂತಾಗಿ ಹಲವು ಬಗೆಯ ಜನರಿದ್ದಾರೆ. ಸಮಾಜದಲ್ಲಿ ಈ ವರ್ಗೀಕರಣ ಅವರ ಸ್ವಭಾವವನ್ನು ಅನುಸರಿಸಿ ಮಾಡಿದ್ದು. ಇದನ್ನೇ ಭಾಸ್ಕರ ಕವಿ ಹೀಗೆ ದೃಢಪಡಿಸಿದ್ದಾನೆ:—

ಧರೆಯೊಳುತ್ತಮರಿಂಗಿತದೊಳುರು
ತರದೊಳರಿವರು ಮಧ್ಯಮರು ಕೇ
ಳ್ದರಿ ಬಂಧಮರು ಕಂಡರಿವರತ್ಯಧಮರಾದವರು
ದರುಶನ ಶ್ರವಣೇಂಗಿತದೊಳರಿ
ಯರು ಸೋನಿಶ್ಚಯವ..........

ಮಾನವರೆಲ್ಲ ಒಂದೇ ಎನ್ನುವ ಮಾತು ಸತ್ಯವಾದರೂ, ಅವರ ಯೋಗ್ಯತೆಗಳು ಒಂದೇ ಆಗಿರುವುದಿಲ್ಲ. ಸ್ವಭಾವಗಳೂ ಸಹ ಭಿನ್ನವೆ. ಅದನ್ನೇ ನಯಸೇನಕವಿ ಹೀಗೆಂದು ದೃಷ್ಟಾಂತ ಪೂರ್ವಕವಾಗಿ ಬಿತ್ತರಿಸಿದ್ದಾನೆ:—

ಬಾಳೆಯ ಪಣ್ಣದೊಂದು ರುಚಿ ನೇರಿಲ ಪಣ್ಣೊಳಗುಂಟೆ ಭಾವಿಪಂ
ದೀಳೆಯ ಪಣ್ಣದೊಂದು ರುಚಿ ಮಾವಿನ ಪಣ್ಣೊಳಗುಂಟೆ ಸಂದಕಿ
ತ್ತೀಳೆಯ ಪಣ್ಣದೊಂದು ರುಚಿ ಬೇವಿನ ಪಣ್ಣೊಳಗುಂಟೆ ತಾನಣಂ

ತಾಳಫಲಂಗಳೊಂದು ರುಚಿ ತುಂಬುರ ವಣ್ಣೊಳಗುಂಟಿ ಲೋಕದೊಳ್
ಅಂತು ಮಾತುಲಿಂಗ ಮಾಳ್ಪರೆಂಬ ಪೆಸರ್ ಸಮಾನಮಾದೋಡಂ ಮಾತುಗಳುಂ
ಪರಿಣಾಮಮುಂ ಬೇರೆ ಬೇರೆಯಕ್ಕುಮದರಿಂ.

ಇನ್ನೊಬ್ಬರ ಮನದ ಇಂಗಿತವನ್ನು ಅರಿತು ನಡೆಯುವುದು ಒಂದು ಉದಾತ್ತ ಗುಣವೆಂದು ಪರಿಗಣಿತವಾಗಿದೆ. ಪರೇಂಗಿತ ಪರಿಗ್ರಹಣ ಸುಸಂಸ್ಕೃತನ ಒಂದು ಲಕ್ಷಣವೆಂದು ಪ್ರಾಜ್ಞರು ತಿಳಿಸಿದ್ದಾರೆ. ಒಬ್ಬ ವ್ಯಕ್ತಿಯ ಗುಣಗಳನ್ನು ಪಟ್ಟಿಮಾಡಿ ಕೀರ್ತಿಸುವಾಗ ಕಾವ್ಯಗಳು, ಶಾಸನಗಳು ಈ ಸದ್ಗುಣವನ್ನು ಉಲ್ಲೇಖಿಸಿವೆ.

ಸಮಾಜದಲ್ಲಿ ಗಂಡ ಹೆಂಡಿರ ನಡುವೆ, ತಂದೆ ತಾಯಿ-ಮಕ್ಕಳ ಮಧ್ಯೆ, ಅಧಿಕಾರಿ ಸಿಬ್ಬಂದಿ ನಡುವೆ ಇರುವ ಬಾಂಧವ್ಯ ನಿಕಟವಾಗಲು ಇದು ಬೇಕು. ಇಂಗಿತಜ್ಞತೆ ಇದ್ದ ಕಡೆ ಘರ್ಷಣೆಗೆ, ವೈಮನಸ್ಯಕ್ಕೆ ಎಡೆಯಲ್ಲಿ? ಒಬ್ಬರು ಇನ್ನೊಬ್ಬರ ಮನಸ್ಸನ್ನರಿತು ನಡೆಯುವಲ್ಲಿ ಎಲ್ಲರಿಯದು ದ್ವೇಷಾಸೂಯೆ? ಆಗ ಅರಳುವ ಸಮಾಜವನ್ನು ನೆನೆಸಿಕೊಂಡರೆ ಮೈ ಪುಲಕಿತವಾಗುತ್ತದೆ. ವೆಚ್ಚಕ್ಕೆ ಹೊನ್ನು, ಬೆಚ್ಚನೆಯ ಮನೆಯು ಜೊತೆಗೆ ಇಚ್ಛೆಯರಿತು ನಡೆವ ಸತಿ ಇದ್ದರೆ, ಆ ಸಂಸಾರ ಸ್ವರ್ಗಕ್ಕೆ ಕಿಚ್ಚು ಹಚ್ಚು ಎನ್ನುವಂತೆ ಇರುತ್ತದೆ. ಎಂದಿರುವ ಸರ್ವಜ್ಞ ಅನುಭವದ ಮಾತನ್ನೇ ಆಡಿದ್ದಾನೆ

'ಅರುಬುವವರು ಇದ್ದ ಊರಿಗಿಂತ ಕಾಡು ಒಳ್ಳೆಯದು' ಎಂದಂತೆಯೇ ಪರೇಂಗಿತ ಜ್ಞಾನದ ಪರಿಜ್ಞಾನವಿಲ್ಲದವರ ನಡುವೆ ಏಗುವುದಕ್ಕಿಂತ ಮರಣವೇ ವಾಸಿ ಎನಿಸಿದರೆ ಆಶ್ಚರ್ಯವಿಲ್ಲ. ಅಂಥ ಜನರನ್ನು ಕುರಿತೇ ಡಿ. ವಿ. ಜಿ. ಹೀಗಂದಿದ್ದು;

ಇಂಗಿತ ಜ್ಞಾನವಲ್ಲದ ಬಂಧುಪರಿವಾರ
ಹಂಗಿಸುವ ಛಲವುಳ್ಳ ಸತಿ ಪುತ್ರಸಖರ್
ಬಂಗಾರ ಪಸಿ ಚುಚ್ಚಿ ಸಿಂಗರದ ಬೊಟ್ಟಿಸುವ
ಮಂಗ ಬುದ್ಧಿಯ ಜನರು ಮಂಕುತಿಮ್ಮ.

ಇನ್ನೊಬ್ಬರ ಆಶಯವನ್ನು ಅರಿಯುವ ಪ್ರಯತ್ನ ಸುಲಭವಾದುದೇನೂ ಅಲ್ಲ. ಇದೊಂದು ರೀತಿಯಲ್ಲಿ ಪರಕಾಯ ಪ್ರವೇಶವೇ. ಸಹೃದಯತೆಯಿಂದ ಮಾತ್ರ ಇದು ಸಾಧ್ಯ. ಮನದಾಳದ ಸೂಕ್ಷ್ಮಸಂವೇದನೆಗಳನ್ನು ಅರಿತು ಅದರಂತೆ ನಡೆದುಕೊಳ್ಳಲು ಸಾಕಷ್ಟು ಚಾತುರ್ಯಬೇಕು. ಈ ಪ್ರಯತ್ನ ಯಾವಾಗಲೂ ಸಂಪೂರ್ಣ ಯಶಸ್ವಿಯಾಗುವುದೆಂದು ಹೇಳಲಾಗದು.

ಇಂಗಿತಜ್ಞತೆ ಕೆಲವರಿಗೆ ಸಹಜವಾಗಿಯೇ ಬರುತ್ತದೆ. ಮತ್ತೆ ಕೆಲವರು ಗ್ರಂಥಾಧ್ಯಯನ, ಅನುಭವಿಗಳೊಡನಾಟ, ಲೋಕಸಂಚಾರಗಳಿಂದ ಗಳಿಸಿಕೊಳ್ಳುತ್ತಾರೆ.

ತಾಯಿ ತನ್ನ ಮುಗ್ಧ ಶಿಶುವಿನ ಬೇಕು ಬೇಡಗಳನ್ನು ಹೇಗೆ ತಿಳಿಯುತ್ತಾಳೆ? ಮಗು ಏನನ್ನು ಹೇಳದಿದ್ದರೂ ಆಕೆ ಅದರ ಹೊಟ್ಟೆ ನೇತ್ರಗಳನ್ನು ನೋಡಿ ಅರೈಕೆ ಮಾಡು ತ್ತಾಳೆ ತಾಯ್ತನ ಸಹಜವಾಗಿಯೇ ಕಲಿಸುವ ಗುಣ ಇದು.

ಎರಡು ಜೀವ ಪರಸ್ಪರ ಸ್ನೇಹ, ಅನುರಾಗ ಅಥವಾ ಮತ್ತಾವುದಾದರು ಅನ್ಯೋನ್ಯ ಸಂಬಂಧದಿಂದಾಗಿ ಒಂದಾದಾಗ ಅವರನ್ನು ಬಹುವಾಗಿ ಬಂಧಿಸಿಡುವ ಗುಣ ಇಂಗಿತಜ್ಞತೆಗೆ ಇದೆ. ದಂಪತಿಗಳ ಇಂಗಿತಜ್ಞತೆಯ ಬಗ್ಗೆ ಒಂದು ಸಂಸ್ಕೃತದ ಸೂಕ್ತಿ ಹೀಗೆ ಇದೆ;

ಯ ದೇವ ರೋಚತೇ ಮಹ್ಯಂ ತದೇವ ಕುರುತೇ ಪ್ರಿಯಾ ಇತಿವೇತ್ತಿ
ನ ಜಾನಾತಿ ಯತ್ಪ್ರಿಯಂ ಯತ್ಕರೋತಿವಾ॥

ಒಬ್ಬ ಯುವಕ ಹೊಸದಾಗಿ ಮದುವೆಯಾಗಿ ಸಂಸಾರ ಆರಂಭಿಸಿದ. ತನ್ನ ಹೆಂಡತಿ ತನಗೆ ಯಾವುದು ಇಷ್ಟವೋ ಅದನ್ನೇ ಮಾಡುತ್ತಾಳೆ, ಭೇಷ್ ಎಂದು ಕೊಂಡನಂತೆ. ವಾಸ್ತವವಾಗಿ ಅವಳು ಏನು ಮಾಡಿದರೂ ಅದೇ ಅವನಿಗೆ ಪ್ರಿಯವಾಗಿರುತ್ತಿತ್ತು. ಹೀಗಾಗಿ ತನಗೆ ಯಾವುದು ಪ್ರಿಯ, ಅವಳು ಮಾಡುತ್ತಿರುವುದು ಏನು ಎಂಬುದೇ ತಿಳಿಯದೆ ಇರುವ ಸ್ಥಿತಿ ಆತನದಾಗಿತ್ತು. ಇಂಥ ಗೊಂದಲಗಳು ಕೆಲವು ಸಲ ಉಂಟಾ ದರೂ ಅದರ ಪರಿಣಾಮ ಮಾತ್ರ ಹಾರ್ದಿಕವೇ.

ಆಡದೇ ಮಾಡುವುದು ಹೇಗೆ ಉತ್ತಮ ಗುಣವೋ ಇನ್ನೊಬ್ಬರು ಹೇಳುವ ಮುನ್ನ ಅವರ ಆಶಯಗಳನ್ನು ತಿಳಿದು ನಡೆದು ಕೊಳ್ಳುವುದೂ ಕೂಡ ಅದರಂತೆ ಉತ್ತ ಮೋತ್ತಮ ಗುಣ ಇಂಥ ಸದ್ಗುಣ ನಮ್ಮಲ್ಲಿ ಅಳವಡಲು ನಾವು ಮನಸ್ಸು ಮಾಡಬೇಕು.

(ಆಕಾಶವಾಣಿ ಕೃಪೆಯಿಂದ)

# ಕನ್ನಡಕ್ಕೆ ಬಸವಣ್ಣನವರ ಕೊಡುಗೆ

—ಡಾ|| ಜಿ. ಎಸ್. ಶಿವರುದ್ರಪ್ಪ, ಬೆಂಗಳೂರು

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ
ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತಿರ್ದುದಯ್ಯಾ
ಶಿವನ ಪ್ರತಾಪ

ಬಸವಣ್ಣನವರ ವ್ಯಕ್ತಿತ್ವವನ್ನು ಕುರಿತು, ಅವರ ಸಮಕಾಲೀನರಾದ ಶ್ರೀ ಅಲ್ಲಮ ಪ್ರಭುಗಳು ಮಾಡಿದ ವ್ಯಾಖ್ಯಾನ ರೂಪದ ವಚನ ಇದು. ದಿವ್ಯ ಅನುಭಾವಿಯೊಬ್ಬರು ಅಂದಿನ ಮಹಾಸಾಧಕರೊಬ್ಬರನ್ನು ಕುರಿತು ಆಡಿದ ಈ ರೂಪಕ ಬಸವಣ್ಣನವರ ವ್ಯಕ್ತಿತ್ವದ ಸಮಗ್ರ ಚಿತ್ರವನ್ನು ಕೊಡುವುದರ ಜೊತೆಗೆ, ಅಂದು ಶಿವಶರಣರಿಂದ ಪ್ರಚಲಿತವಾದ ವಚನವೆಂಬ ವಿಶಿಷ್ಟ ಸಾಹಿತ್ಯ ಪ್ರಕಾರದ ಸ್ವರೂಪ ಸ್ವಭಾವಗಳನ್ನು ಪರಿಚಯ ಮಾಡಿಕೊಡುತ್ತದೆ. ಅಲ್ಲಮ ಪ್ರಭುಗಳು ಹೇಳುವಂತೆ ಬಸವಣ್ಣನವರು ಒಂದು ಜ್ಯೋತಿಯು ಆದರೆ ಅದರಿಂದ ತೊಳಗಿ ಬೆಳಗುತ್ತಿರುವುದು. ಶಿವನ ಪ್ರತಾಪ ಅನುಭಾವದ ತೇಜಸ್ಸು. ಆ ಒಂದು ಜ್ಯೋತಿ ಹನ್ನೆರಡನೆಯ ಶತಮಾನದಂದು ತನ್ನ ದೀಪ್ತಿಯಿಂದ ಎಷ್ಟೊಂದು ದೀಪಗಳನ್ನು ಹತ್ತಿಸಿ ತಮಂಧಘನವಾದ ಅಂದಿನ ಆವರಣದಲ್ಲಿ ವಿನೂತನವಾದುದೊಂದು ಧಾರ್ಮಿಕ ಕ್ರಾಂತಿಯನ್ನು ಹಾಗು ಅದರ ಪರಿಣಾಮ ರೂಪದ ಸಾಹಿತ್ಯ ಕ್ರಾಂತಿಯನ್ನೂ ಮಾಡಿ, ಪಂಪನ ನಂತರ ಮತ್ತೊಂದು ನವೋದಯಕ್ಕೆ ಆಚಾರ್ಯ ಶಕ್ತಿಯಾಯಿತು. ಅಂತೆಯೇ ಅವರ ಬದುಕು ಎಷ್ಟೊಂದು ಕವಿಗಳ ಕಾವ್ಯಕ್ಕೆ ಪ್ರೇರಣೆಯನ್ನು, ಸ್ಫೂರ್ತಿಯನ್ನು ನೀಡಿತು! ಈ ದೃಷ್ಟಿಯಿಂದ ನೋಡಿದರೆ ಬಸವಣ್ಣನವರು ಕನ್ನಡ ಸಾಹಿತ್ಯದ ಪ್ರಯೋಗಶೀಲವಾದ ಕ್ರಾಂತಿ ಪ್ರವಾಹವೊಂದರ ದೊಡ್ಡ ತರಂಗವಾಗಿ ಗೋಚರಿಸುತ್ತಾರೆ.

ಮಹಾವ್ಯಕ್ತಿಗಳು ತಮ್ಮ ಬದುಕಿನ ಕಡಲನ್ನು ಕಡೆದು ಪಡೆದ ಭಾವ ಮೌಲ್ಯಗಳು ಅಂದಂದಿನ ಯುಗದ ಕವಿವಾಣಿಯ ಮೂಲಕ ಪ್ರಸಾರಗೊಳ್ಳುತ್ತವೆ. ಅಂತೆಯೇ ಬಸವಣ್ಣನವರ ಬದುಕು, ಹಾಗೂ ಅವರು ಮಥಿಸಿ, ಬಾಳಿನಾಳದಿಂದ ತಂದ ಮೌಲ್ಯಗಳು ಹರಿಹರ, ರಾಘವಾಂಕ ಮೊದಲಾದ ಕವಿಗಳ ಕಾವ್ಯದಲ್ಲಿ ಪುನಃ ಪ್ರಸಾರಿತವಾಗಿ ಬಸವಯುಗವೊಂದನ್ನು ಕನ್ನಡ ಸಾಹಿತ್ಯದಲ್ಲಿ ತೆರೆದಿವೆ. ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಗಂಗೆ–ಎಂಬ ಅವರ ಸಂಸಾರ ಸೂತ್ರ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ–ಎಂಬ ಮಾತಿನಿಂದ ಧ್ವನಿತವಾಗು

ವುದು. ಚಾರಿತ್ರ್ಯ ಶುದ್ಧಿಯ ಬೆಲೆ ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭ
ರೆಲ್ಲರನು ಒಂದೇ ಎಂಬೆ-ಎನ್ನುವಲ್ಲಿ ಕಂಡುಬರುವ ಸಮಾನತೆಯ ಆದರ್ಶ, ಎನಗಿ
ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ-ಎಂಬಲ್ಲಿ ಕಂಡುಬರುವ ಅವಿನಯ ವ್ಯ
ವಚನವೇ ಸಕಲ ಜಪಂಗಳಯ್ಯ ಎಂಬ ಮಾತಿನಿಂದ ವ್ಯಕ್ತವಾಗುವ ಆ ಮೊರ್ದವ
ನುಡಿದರೆ ಮುತ್ತಿನ ಹಾರದಂತಿರಬೇಕು..........ನುಡಿದರೆ ಲಿಂಗ ಮೆಚ್ಚಿ ಅಹುದ
ಬೇಕು-ಎನ್ನುವಲ್ಲಿ ಮಾತಿನ ರೀತಿಯಲ್ಲಿ ಕುರಿತ ವಿವರಣೆ ಹಾಗೂ ಅದು ಲು
ಬೇಕಾದನೆ ಲೆ, ನಾಳೆ ಬಪ್ಪುದು ನಮಗಿಂದೇ ಬರಲಿ ಇಂದು ಬಪ್ಪುದು ನಮಗೀಗಲೆ
ಬರಲಿ ಇದಕಾರಂಜುವರು ಇದಕಾರಳುಕವರು-ಎನ್ನುವಲ್ಲಿ ಕಂಡುಬರುವ ಎವ ರ್
ವ್ಯಕ್ತಿತ್ವದ ಮೃತ್ಯುಂಜಯ ಮನೋಹರ-ಭಾವ ಈ ಎಲ್ಲ ಭಾವಮೌಲ್ಯಗಳ ವಿಶಿ
ಸಮನ್ವಯ ಬಸವಣ್ಣನವರ ಜ್ಯೋತಿರ್ಮಯ ನಿರ್ಮಲ ಮುಗ್ಧ, ಮನೋಹ
ಮೂರ್ತಿಯ ಚಿತ್ರವನ್ನು ಕನ್ನಡಕ್ಕೆ ನೀಡಿವೆ.

ಕನ್ನಡ ಸಾಹಿತ್ಯದ ದೃಷ್ಟಿಯಿಂದ ನೋಡುವುದಾದರೆ ಬಸವಣ್ಣನವರ ವಚ
ಗಳು ಅಪೂರ್ವವಾದ ಕಾಣಿಕೆ ಎನ್ನಬಹುದು. ಬಸವಣ್ಣನವರಿಗಿಂತ ಹಿಂದೆಯೇ
ವಚನವಾಙ್ಮಯದ ತೊರೆ ಹರಿಯುತ್ತಿದ್ದಿತಾದರೂ, ಬಸವಣ್ಣನವರ ವ್ಯಕ್ತಿತ್ವದ ನೆ
ನುಗ್ಗಿ ಅದರ ಪಾತ್ರ ವಿಸ್ತಾರವಾಯಿತು. ತುಂಬಿ ಗಂಭೀರವಾಯಿತು ಅದರೆ ಒಂದ
ಮಾತು. ಬಸವಣ್ಣನವರು ಪ್ರಧಾನವಾಗಿ ಸಾಹಿತಿಯಲ್ಲ! ದೊಡ್ಡ ಆಚಾರ್ಯರು
ಎಂದರೆ ಅವರು ಸಾಹಿತಿಯ ಮನೋಭಾವದಿಂದ ವಚನ ರಚನೆಗೆ ಕೈ ಹಾಕಿದವರಲ್ಲ
ತಾವು ಆಡಿದ ಮಾತು ಕಾವ್ಯವಾಯಿತೇ ಇಲ್ಲವೇ ಎಂದು ಶಂಕಿಸಿದವರಲ್ಲ ತಾವು ಬ
ಡದ್ದು ಕಾವ್ಯವಾಗಲಿಲ್ಲವೆಂದು ಕೊರಗಿದವರೂ ಅಲ್ಲ. ಏಕೆಂದರೆ ಅವಗಿರಲಿಲ್ಲ, ಆಸ್ಥಾ
ಕವಿಯಾಗಿ ಪಂಡಿತರನ್ನು ಮೆಚ್ಚಿಸಬೇಕೆಂಬ ಹಂಬಲ. ಅವರಿಗಿದ್ದುದು ಬದುಕು ಹ
ನಾಗಬೇಕೆಂಬ ಹೆಬ್ಬಯಕೆ, ಆ ಸುಧಾರಣೆಯನ್ನು ಕುರಿತ ಹಂಬಲ, ತುಡಿತ, ತೊ
ಲಾಟ ಹಾಗೂ ಇದರಲ್ಲಿ ಜೀವ ಏರಿದ ಎತ್ತರ-ಇವು ಅವರಿಗೆ ಪ್ರಧಾನ. ಹೀಗಾ
ಅವರು ಆಡಿದ ಮಾತು ಅವರಿಗರಿವಿಲ್ಲದಂತೆಯೇ ಕಾವ್ಯವಾಯಿತು. ವಚನವೆಂ
ಹೊಸ ಸಾಹಿತ್ಯ ಪ್ರಾಕಾರವೊಂದು ಮೂಡಿ ಬೆಳೆಯಿತು. ಅಂದಂದಿನ ಅನುಭ
ಗಳನ್ನು ನೇರವಾಗಿ ಸರಳವಾಗಿ ನಿರೂಪಿಸುವ ಆತ್ಮಕಥನದ ರೀತಿಯೇ ಇವುಗಳ ಚೆಲು
ಅದುವರೆಗೂ ಹರಿದು ಬಂದ ವಸ್ತುನಿಷ್ಠ ಪುರಾತನ ಪದ್ಧತಿಯನ್ನು ತೆಗೆದೊಗೆದು
ತಮ್ಮ ಅನುಭವಗಳನ್ನು ವೈಯಕ್ತಿಕವಾಗಿ ಅಭಿವ್ಯಕ್ತಗೊಳಿಸುವ ವ್ಯಕ್ತಿನಿಷ್ಠ ವಿಧಾ
ವೊಂದು ಮೂಡಿದುದು ಅತ್ಯಂತ ಹರ್ಷದಾಯಕವಾದ ಸಂಗತಿ ಈ ಬಗ್ಗೆ ಬಸವಣ್ಣ
ನವರೆ ಒಂದೆಡೆ-

ತಾಳ ಮಾನ ಸರಿಸವನರಿಯೆ, ಓಜೆ ಬಜಾವಣೆ
ಲೆಕ್ಕನವರಿಯೆ.

ಅಮೃತಗಣ ದೇವಗಣನರಿಯೆ !
ಕೂಡಲ ಸಂಗಮದೇವಾ, ನಿನಗೆ ಕೇಡಿಲ್ಲವಾಗಿ
ಆನು ಒಲಿವಂತೆ ಹಾಡುವೆ.

ಎನ್ನುತ್ತಾರೆ. ಈ ವಚನ ಅಂದು ಮೈಗೊಂಡ ವಚನ ರಚನಾ ಕ್ರಮವನ್ನು ಹೇಗೋ ಹಾಗೆಯೇ ಕವಿಮನೋ ಧರ್ಮವನ್ನು ಬಿಂಬಿಸುತ್ತದೆ. ಆನು ಒಲಿದಂತೆ ಹಾಡುವೆ ಎಂಬ ವ್ಯಕ್ತಿ ಸ್ವಾತಂತ್ರ್ಯದ ಧೈರ್ಯ ಬಹುಶಃ ಅಂದಿನ ತನಕ ಯಾವ ಕವಿಗೂ ಬಂದಂತೆ ತೋರುವುದಿಲ್ಲ. ತಮ್ಮ ಆಶ್ರಯದಾತರ ಮನಸ್ಸಂತೋಷಕ್ಕೋ ಪಂಡಿತ ಪ್ರಶಸ್ತಿಗೋ ಮನುಜರ ಮೇಲೆ, ಸಾವವರ ಮೇಲೆ ತಮ್ಮ ಕಾವ್ಯವನ್ನು ಪ್ರಧಾನವಾಹ ಭಾಷೆಯಲ್ಲಿ ಕಟ್ಟಿದ ಪುರಾಣ ಕವಿ ಪುಂಗವರ ಪದ್ಧತಿಯಲ್ಲಿ ಅಂದಂದಿನ ಅನುಭವವನ್ನು ತಮ್ಮದೇ ಆದ ಆಡುಮಾತಿನ ಜಾಡಿನಲ್ಲಿ ಹಂಚಿ ಆನು ಒಲಿದಂತೆ ಹಾಡುವೆ ಎಂಬ ವ್ಯಕ್ತಿ ನಿಷ್ಠವಾದ ಭಾವಗೀತಾತ್ಮಕವಾದ ಈ ಪದ್ಧತಿಯಲ್ಲಿ ಅಚ್ಚುಕಟ್ಟಾಗಿ ಇಕ್ಕೆಲಗಳಲ್ಲಿಯು ಸಾಲು ಮರಗಳನ್ನು ಬೆಳೆಸಿಕೊಂಡು ಭಕ್ತ ಭಾವಣಿಗಳನ್ನು ನಿರ್ಮಿಸಿಕೊಂಡು, ನಗರದಿಂದ ನಗರಕ್ಕೆ ಸಾಗುವ ರಾಜಮಾರ್ಗಗಳಲ್ಲಿ ಕಾಡು ಮೇಡುಗಳ ನಡುವೆ ಏರಿಳಿದು, ಗಿರಿನೆತ್ತಿಯ ತೀರ್ಥಕ್ಷೇತ್ರದೊಳಡೆಗೆ ನಡೆಯುವ ಹೆಜ್ಜೆ ಬರೆದ ಕಾಲು ಹಾದಿಗಳ ರೀತಿಯಲ್ಲಿ.

ಬಸವಣ್ಣನವರ ವಚನಗಳಲ್ಲಿ ಬೇರೆ ಯಾರ ವಚನಗಳಲ್ಲಿಯು ಕಾಣದ ಒಂದು ವಿಶಿಷ್ಟ ಗುಣವೆಂದರೆ, ಅಂತರಂಗದ ಅಂದಂದಿನ ತೊಳಲಾಟಗಳ ನಿರೂಪಣೆ ಸತ್ಯದ ಹಾದಿ ನಡೆವ ಮಹಾಸಾಧಕನೊಬ್ಬ ತನ್ನ ಅಂತರಂಗ ಹಾಗೂ ಬಹಿರಂಗ ಜಗತ್ತಿನೊಡನೆ ನಡೆಸಿದ ನಿರಂತರ ಹೋರಾಟದ ಕ್ರಿಯೆ—ಪ್ರತಿಕ್ರಿಯೆಗಳ ಚಿತ್ರ ಇವುಗಳಲ್ಲಿದೆ. ಪ್ರಾಮಾಣಿಕವಾದ ಆತ್ಮಶಂಶೋಧಕರೊಬ್ಬರ ಅಪೂರ್ವ ದಿನಚರಿಯ ವಿಶಿಷ್ಟ ಮಾದರಿಗಳನ್ನು ಬಸವಣ್ಣನವರ ವಚನಗಳಲ್ಲಿ ನಾವು ಕಾಣಬಹುದು, ಉದಾಹರಣೆಗೆ. ಅವರ ವಚನಗಳಿಂದ ಎತ್ತಿಕೊಂಡ ಈ ಹಲವು ಮಾತುಗಳನ್ನು,

ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯ
ಎನುವನ್ನ ಕಾಯಯ್ಯ
ಕಾಂಚನವೆಂಬ ನಾಯ ನೆಚ್ಚಿ ನಿಮ್ಮ ನಾನು
ಮರೆದೆನಯ್ಯ
ಎನ್ನವರೊಲಿದು ಹೊನ್ನ ಶೂಲದಲಿಕ್ಕಿದರೆನ್ನ
ಹೊಗಳಿ ಹೊಗಳಿ
ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ
ಎನ್ನ ಭಕ್ತನೆಂಬರು ಸಮಚಾರಿಯೆಂಬರು,

ನಾನೇನು ಪಾಪವ ಮಾಡಿದೆನೋ
ಬೆರಣಿಯನಾಯಲೊಲ್ಲದೆ ಅಚ್ಚುಣ್ಣ ತೆರಹಿಲ್ಲವೆನಗೆ
ನೀ ಕರುಣಿಸಾ ಕೂಡಲ ಸಂಗಮದೇವಾ

ಇಂತಹ ಮಾತುಗಳು ಅವರ ಮಾನಸಿಕ ಹೋರಾಟದ ವ್ಯಥೆಯ ಕಥೆಯನ್ನು ಅಂತೆಯೇ ಅವರು ಏರಿದ ನಿಲುವನ್ನು ಸೂಚಿಸುತ್ತವೆ

ಬಸವಣ್ಣನವರ ವಚನಗಳಲ್ಲಿ ಕಂಡುಬರುವ ಮತ್ತೊಂದು ಗುಣವೆಂದರೆ ಅವರ ರೂಪಕ ವೈಭವ. ಕನ್ನಡ ಸಾಹಿತ್ಯದಲ್ಲಿ, ನಾರಣಪ್ಪ, ಬಸವೇಶ್ವರ ಇವರಿಬ್ಬರ ಹಾಗೆ ಭಾಷೆಯ ಸಾಧ್ಯತೆಯನ್ನು ಸೂರೆ ಮಾಡಿದವರು ಹಾಗೂ ರೂಪಕ ನಿರ್ಮಾಣ ಮಾಡಿದವರು ವಿರಳವೆಂದೇ ಹೇಳಬೇಕು ಒಂದು ಪಂಕ್ತಿಯಲ್ಲಿ ಒಂದೇ ಒಂದು ಚಿತ್ರ ಮಿನುಗುತ್ತಾ ನಿಲ್ಲುವುದುಂಟು—ಕಪ್ಪೆ ಸರ್ಪನ ನೆಳಲಲ್ಲಿ ಇಪ್ಪಂತೆ ಆಯಿತಯ್ಯಾ ಕೆಲವಡೆ ಒಂದೇ ವಚನದಲ್ಲಿ ಮೂರು ನಾಲ್ಕು ಶಬ್ದ ಚಿತ್ರಗಳು ಬರುವುದು.

ಬೆಲ್ಲವ ತಿಂದ ಕೋಡಗನಂತೆ ಸಿಹಿಯನರಸದಿರಾ
ಮನವೇ
ಕಬ್ಬು ತಿಂದ ನರಿಯಂತೆ ಹಿಂದಕ್ಕೆಳೆಸದಿರಾ ಮನವೇ
ಗಗನವಡರಿಯದ ಕಾಗೆಯಂತೆ ದೆಸೆದೆಸೆಗೆ
ಹಂಬಲಿಸದಿರಾ ಮನವೇ.

ಹೀಗೆ ಬೆಲ್ಲವ ತಿಂದ ಕೋಡಗ ಕಬ್ಬು ತಿಂದ ನರಿ ಗಗನವಡರಿದ ಕಾಗೆ— ಈ ಮೂರು ಚಿತ್ರಗಳು ಚಂಚಲ ಮನಸ್ಸಿನ ಸ್ವಭಾವದ ಪ್ರತಿಮೆಗಳಾಗಿವೆ. ಮತ್ತೆ ಕೆಲವಡೆ ಒಂದೆ ಪ್ರತಿಮೆ ಒಂದು ವಚನದ ತುಂಬಾ ತುಂಬಿ ಥಳಥಳಿಸುವುದೂ ಉಂಟು.

ಮನೆಯೊಳಗೆ ಮನೆಯೊಡೆಯಿದ್ದಾನೋ ಇಲ್ಲವೋ
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡಯನಿದ್ದಾನೊ ಇಲ್ಲವೊ
ತನುವಿನೊಳಗೆ ಹುಸಿ ತುಂಬಿ ಮನದೊಳಗೆ ವಿಷಯ
ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲ.

ಮನಸ್ಸಿನ ರಿಕ್ತಸ್ಥಿತಿಯ ಸೊಗಸಾದ ಪ್ರತಿಮೆ, ಮನೆಯೊಳಗೆ ಮನೆಯೊಡೆಯನಿಲ್ಲ ಈ ಮನೆಯ ಚಿತ್ರ. ಮತ್ತೆ ಒಂದೊಂದು ಸಲ ಒಂದೇ ಒಂದು ಚಿತ್ರ ಮೂರು ನಾಲ್ಕು ವಚನಗಳಲ್ಲಿ ವಿಸ್ತರಿಸಿ ಸೊಗಸುವುದು ಉಂಟು, ವಿಷಯವೆಂಬ ಹಸರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ ಹಸುವೇನ ಬಲ್ಲದು? ಹಸುರೆಂದೆಳಸುವುದು ಎಂದು ನೋಡಲಾಗುವ ಹಸುವಿನ ಚಿತ್ರ, ಇನ್ನೊಂದು ವಚನದಲ್ಲಿ. ಕೆಸರಲ್ಲಿ ಬಿದ್ದ

# ಬಸವ ಪ್ರಾಶಸ್ತ್ಯ

—ಎಚ್. ದೇವೀರಪ್ಪ

ಹನ್ನೆರಡನೆಯ ಶತಮಾನದಲ್ಲಿ ಮತ್ತು ಅಲ್ಲಿಂದೀಚೆಗೆ ಹುಟ್ಟಿರುವ ವಿಪುಲ ವಚನ ರಾಶಿಯಿಂದಲೂ, ಅರ್ಜುನವಾಡ, ಚೌಡದಾನಪುರ, ವಣಿಗವಳ್ಳಿ ಮುಂತಾದ ಕಡೆ ದೊರೆತಿರುವ ಶಾಸನಗಳಿಂದಲೂ, ಬಸವಣ್ಣನು ಕನ್ನಡ ಸಮಾಜದ ಹಲವು ಕ್ಷೇತ್ರಗಳಲ್ಲಿ ಉಜ್ವಲಕ್ರಾಂತಿಯನ್ನುಂಟುಮಾಡಿ, ಇಡೀ ಕನ್ನಡ ನಾಡನ್ನೇ ಉದ್ಧರಿಸಿದ ಐತಿಹಾಸಿಕ ಮಹಾಪುರುಷನೆಂಬುದು ಗೊತ್ತಾಗುತ್ತದೆ.

ಬಸವೇಶ್ವರನು ವರ್ಣಭೇದ ನೀತಿಯನ್ನು ಧೈರ್ಯವಾಗಿ ಪ್ರತಿಭಟಿಸಿ "ಹಾರುವ ಮೊದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನ್ನೂ ಒಂದೇ ಎಂಬೆ" ಎಂದು ಸಾರಿದನು. ಮನುಧರ್ಮ ಶಾಸ್ತ್ರವೇ ವೇದವೆಂದು ಜನರು ಭಾವಿಸಿದ್ದ ಆ ಕಾಲದಲ್ಲಿ, ಎಂಟುನೂರು ವರ್ಷಗಳ ಹಿಂದೆ, ಜನ ಸಾಮಾನ್ಯರ ಅವಜ್ಞತೆಯ ಫಲವಾಗಿ ಸಮಾಜದಲ್ಲಿ ಬೇರೂರಿ ಹೆಮ್ಮರವಾಗಿ ಬೆಳೆದು ಮರಸಾಗಿದ್ದ ಅಂಧಾಚಾರಗಳು, ಕುರುಡು ನಂಬಿಕೆಗಳು, ಮಾರಿ ಮಸಣಿ, ಚೌಡಿ ಭೂತಗಳ ಪೂಜೆ ಇವುಗಳನ್ನೆಲ್ಲಾ ಬೇರು ಸಹಿತ ನಾಶ ಮಾಡಲು ಪ್ರಯತ್ನಿಸಿದನು. ಸಂಪ್ರದಾಯದಿಂದ ಕೆಲ ಮಟ್ಟಿಗೆ ಪುರುಷನ ಸ್ವಾರ್ಥದಿಂದ, ಪಂಡಿತರ ಶಾಸ್ತ್ರದಿಂದ ಸಾಮಾಜಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ನೆಲೆ ಪಡೆಯದೆ ಮೂಲೆಯ ಮುಡುಪಾಗಿದ್ದ ಹೆಣ್ಣಿಗೆ ಕಣ್ಣು ಕೈ, ಮೈ ಬಂದುದು ಬಸವ ಭಾನುವು ಉದಯವಾದಾಗ. ಕಾಯಕವೇ ಕೈಲಾಸವೆಂದು ಬೋಧಿಸಿ ಶಿವಭಕ್ತರಾದವರು, ಅವರು ಜಂಗಮರಾಗಿದ್ದರೇನು, ಭಕ್ತ ಭಕ್ತರಾಗಿದ್ದರೇನು, ಕಾಯಕವನ್ನು ಮಾಡಿಯೇ ದುಡಿಯಬೇಕೆಂದು ಒತ್ತಿ ಹೇಳಿ, ಆದರಂತೆ ತಾನೂ ಆಚರಿಸಿ ಎಲ್ಲರಿಗೂ ಮಾರ್ಗದರ್ಶಕನಾದವನು ಇವನು; ಕಾಯಕಗಳಲ್ಲಿ ಮೇಲು-ಕೀಳು ಎಂಬ ಭೇದ ಮಾಡಿದವರನ್ನು ಬಿರುನುಡಿಗಳಿಂದ ಅಲ್ಲಗಳೆದು, ಯಾರ ಕುಲವನ್ನಾಗಲೀ, ಅವರ ಕಾಯಕದ ಮೇಲೆ ನಿರ್ಧರಿಸುವುದು ವೀರಶೈವಧರ್ಮಕ್ಕೆ ವಿರುದ್ಧ ಎಂದು ಸಾರಿ ಸಮಾಜದ ಆರ್ಥಿಕ ಭದ್ರತೆಗೆ ತಳಪಾಯ ಹಾಕಿದವನು ಇವನು; ಆಗಮವಿರಲಿ, ಪುರಾಣವಿರಲಿ, ಮತ್ತೊಂದಿರಲಿ, ಅಲ್ಲಿ ಹೇಳಿರುವ ಆಧ್ಯಾತ್ಮಿಕ ತತ್ವಗಳನ್ನು ಮೊದಲು ನಿಮ್ಮ ವಿವೇಕದ ನಿಮ್ಮ ಅನುಭವದ ತಕ್ಕಡಿಯಲ್ಲಿ ತೂಗಿನೋಡಿ ಸರಿಕಂಡುದನ್ನು ಒಪ್ಪಿ ಸಲ್ಲದುದನ್ನು ಧೈರ್ಯವಾಗಿ

ಂಡಿಸಿ ಎಂದು ಬೋಧಿಸಿ ಜನತೆಗೆ ವಿಚಾರ ಸ್ವಾತಂತ್ರ್ಯವಿತ್ತವನು ಇವನು; ಮಾಜ ಪುರುಷನ ಕಣ್ಣ ಪೊರೆಯನ್ನು ತೆಗೆದೊಗೆದು ಅದಕ್ಕೊಂದು ಹೊಸದೃಷ್ಟಿಯನ್ನು ಕೊಟ್ಟ ಸಮಾಜ ಸುಧಾರಕ; ಕನ್ನಡ ಸಾಹಿತ್ಯ ದೇವಿಯನ್ನು ಅಂಗಾಲಿನಿಂದ ಡು ನೆತ್ತಿಯವರೆಗೆ ವೈಯ್ಯಂದ ಬಂದಳಿಕೆಯನ್ನು ಕತ್ತರಿಸಿ ಆ ನುಡಿವೆಣ್ಣಿಗೆ ಒಂದು ಹೊಸ ಉಸಿರನ್ನು, ಹೊಸ ಕಸುವನ್ನು ಕೊಟ್ಟ ಕನ್ನಡ ಕುಲದೀಪಕ; ಲ್ಲರಿಗೂ ಮಿಗಿಲಾಗಿ ಕೀಳು-ಮೇಲೆನ್ನದೆ, ಹೆಣ್ಣು-ಗಂಡು ಎಂದು, ಹಿರಿಯ-ಕಿರಿಯ; ಡವ-ಬಲ್ಲಿದ ಎನ್ನದೆ ಕನ್ನಡ ನಾಡಿನ ಎಲ್ಲಾ ಮಕ್ಕಳಿಗೂ ಶಿವಭಕ್ತಿಯನ್ನು ಉಣಬಡಿಸಿದ ಮಹಾದಾಸೋಹಿ; ನಮ್ಮ ನಾಡಿನ ಜನ ಮನದ ಮೈಲಿಗೆಯನ್ನು ತೊಳೆದು ಉಣಬಡಿಸಿ ಇಡೀ ಜನತೆಯನ್ನು ಹಿಡಿದೆತ್ತಿದ ಮಹಾವೀರ ಬಸವಣ್ಣ. ಕನ್ನಡ ದೇಶ ಇಂತಹ ಮಹಾ ವಿಭೂತಿಯನ್ನು ಪಡೆದಿರುವುದು ಬಹುಶಃ ಇದೊಂದೇ ಸಲ.

ಇಂತಹ ದಿವ್ಯ ಪುರುಷನ ಸಾಹಸ ಚರಿತ್ರೆಯನ್ನು ಕೃತಿಮಾಡಿ, ಇತರ ವೀರಶೈವ ಕವಿಗಳಂತೆ ತನ್ನ ಭಕ್ತಿಯ ಕಾಣಿಕೆಯನ್ನು ಸಲ್ಲಿಸಿದ್ದಾನೆ, ಸಿಂಗಿರಾಜ. ಇವನ ದೃಷ್ಟಿಯಲ್ಲಿ ಬಸವೇಶ್ವರನು ಪರಶಿವನ ಸಾಕಾರ ಸ್ವರೂಪ. ಈ ಬಸವ ಭಕ್ತಿ ಕಾವ್ಯದಲ್ಲಿ ಹೇಗೆ ಕಾಣಿಸಿಕೊಂಡಿದೆಯೆಂಬುದನ್ನು ತೋರಿಸುವುದಕ್ಕೆ ನಿದರ್ಶನಗಳಿಗಾಗಿ ಹುಡುಕಾಡುವುದೇ ಅನಾವಶ್ಯಕ. ಬಸವೇಶ್ವರನು ಭೂಲೋಕಕ್ಕೆ ಬರಲು ಕಾರಣವನ್ನು ಹೇಳುವಾಗ "ಉಚಿತ ಕೊರತೆಯು ಕುಂದು ನಿಂದೆಪ್ರೇರಿಸು ಜನನ ವೈಕಾರವಂ ತೊಡರ್ಚುವುದು" ಧರ್ಮ ದ್ರೋಹವೆಂದೇ ಸಿಂಗಿರಾಜನ ನಂಬಿಕೆ. ಅವನು ಭೂಲೋಕದಲ್ಲಿದ್ದರೇನು? ಕೈಲಾಸದಲ್ಲಿದ್ದರೇನು? 'ಸಾಕ್ಷಾತ್ ಪರಶಿವನ ಪ್ರತಿಬಿಂಬ' ವೆ. "ಭವಪಾವ ಕೊಲುವನ" ಮೇಲೆ ವಿಷವು ಸಿಡಿದಿದ್ದರೆ ವಿಷವನ್ನೆ ತೊಡೆದುಕೊಂಡಿರುವನೆನ್ನುವುದು ಸರಿಯೆ? "ಬಸವ ಮರ್ತ್ಯನೆ? ಬಸವ ನರನೆ?" ಎಂದು ಮುಂತಾಗಿ ಸಿಂಗಿರಾಜನ ಕೇಳಿಕೆ. 'ಭೂರುದ್ರ' ನೂ 'ಮಾನವ ಮಹಾದೇವ' ನೂ 'ಪರಬ್ರಹ್ಮ ಪಂಚಾಸ್ಯ' ನೂ 'ಆದಿಬ್ರಹ್ಮಾಚಾರ್ಯ' ನೂ ಆದ ಬಸವೇಶನ ಗರ್ಭಾವತರಣ ಎಲ್ಲರಂತಲ್ಲ. ಮಾದಲಾಂಬಿಕೆಯು ನಂದಿವ್ರತವನ್ನು ಆಚರಿಸುತ್ತಾ ಪುತ್ರಾರ್ಥ ಭಿಕ್ಷಕ್ಕೆ 'ಬಾಯಿ ತೆರೆಯಲೊಡಹೊಕ್ಕನಾ ಚರವೃಷಭ· ಸ್ಥಿರವೃಷಭನೋಲಗಿರ್ದು ಕೂರ್ತು,' ಬಸವನಿಗೆ 'ಬಾಲ್ಯತೆಯನ್ನೂ,' ಶಶಿಧರನಿಗೆ 'ವೃದ್ಧತೆಯನ್ನೂ' ಹೇಳುವುದು ಈ ಕವಿಗೆ ಸೇರದು. ಕೈಲಾಸನಾಥನ ಅಪ್ಪಣೆಯನ್ನು ಮರ್ತ್ಯ ಲೋಕದ ಮಣಿಹವನ್ನು ಪೂರೈಸುವುದಕ್ಕೆ ಬಂದಿರುವ ಆದಿ ವೃಷಭನೇ ಬಸವಣ್ಣ. ಆದುದರಿಂದ ಇವನು ಎಂತಹ ಪವಾಡವನ್ನಾದರೂ ಮೆರೆಯಲು ಶಕ್ತ; ಕವಿಯ ದೃಷ್ಟಿಯಲ್ಲಿ ಅದು ಅತಿಶಯವೂ ಅಲ್ಲ, ಅಸಂಭವವೂ ಅಲ್ಲ!

# ಸಮಾಜವಾದಿ ಬಸವಣ್ಣ

—ಜಿ. ಸೋಮಶೇಖರಪ್ಪ, ಎಂ.ಎ.,ಬಿ.ಎಲ್.

ವೈಜ್ಞಾನಿಕ ಮತ್ತು ಔದ್ಯೋಗಿಕ (Scientific and Technological) ಮುನ್ನಡೆಯಿಂದಲೋ ಅಥವಾ ಮಾನವನ ಉದಾಸೀನದಿಂದಲೋ ಅಧ್ಯಾತ್ಮಿ ಗೊತ್ತು ಗುರಿಯೊಂದಿದೆ ಎಂಬ ನಂಬಿಕೆ ಆಧುನಿಕ ಮಾನವನಿಗೆ ಗೋಚರಿಸದಾಗಿದೆ. ಧರ್ಮ, ದೇವರು, ಸತ್ಯ ಇವುಗಳ ನೈಜ ಮೌಲ್ಯ ತಿಳಿಯದಾಗಿದೆ ಒಂದು ವೇಳೆ ತಿಳಿದರೂ ಮಾನವತೆ ನೇರ ಮಾರ್ಗದಲ್ಲಿ ನಡೆಯದಾಗಿದೆ. ಆದುದರಿಂದಲೇ ನಮ್ಮ ಬಾಳಿನ ಗೋಳು ಅಳಿಯದಾಗಿದೆ. ಸಮಾಜದಲ್ಲಿ ಚಿರಶಾಂತಿ ಬೀಜವು ಮೊಳೆಯದಾಗಿದೆ ಬೆಳೆಯದಾಗಿದೆ

ಇಂದು ವಿಶ್ವದಲ್ಲಿ ಪ್ರಜಾ ಪ್ರಭುತ್ವ, ಪ್ರಭು ಪ್ರಭುತ್ವ, ಕುಲೀನ ಪ್ರಭುತ್ವ, ಸಮಾಜವಾದ, ಸಾಮ್ಯವಾದ ಇವೇ ಮುಂತಾದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಿದ್ಧಾಂತಗಳು ಪ್ರತಿ ಸಮಾಜವನ್ನೂ ತನ್ನದೇ ಆದ ಹಾದಿಯಲ್ಲಿ ನಡೆಸಿಕೊಂಡು ಹೋಗಲು ಒಂದರೊಡನೊಂದು ಮಹಾರಭಸದಿಂದ ಸ್ಪರ್ಧಿಸುತ್ತಿವೆ.

ಇದು ಜಾಗತಿಕ ಪರಿಸ್ಥಿತಿಯಾದರೆ ನಮ್ಮ ಸಮಾಜದ ಸ್ಥಿತಿಯು ಅವ್ಯವಸ್ಥೆಯಾಗುತ್ತಿದೆ. ಸಾಮಾಜಿಕ ಶೈಕ್ಷಣಿಕ ಸಮಸ್ಯೆಗಳೊಂದು ಕಡೆಯಾದರೆ, ರಾಜಕೀಯ ಆರ್ಥಿಕ ಸಮಸ್ಯೆಗಳ ಕರಾಳ ನೃತ್ಯ ಮತ್ತೊಂದು ಕಡೆ. ಸಾಮಾನ್ಯ ಜನಕ್ಕೆ ಆರ್ಥಿಕ ಸಮಸ್ಯೆಯ ಬಗ್ಗೆ ಯೋಚಿಸುವ ವಿವೇಚನೆಯೂ ಇರುವುದಿಲ್ಲ. ವ್ಯಕ್ತಿಗೆ ಆರ್ಥಿಕ ಪರಿಸ್ಥಿತಿಯ ಅರ್ಥವಾಗುವುದು ಸ್ವತಃ ಸಂಸಾರ ಮಾಡುವಾಗ ಮಾತ್ರ. ಆಗ ಆತನಿಗೆ ಬಡತನದ ಭೂತ ಗೋಚರಿಸುತ್ತದೆ ಹೊಟ್ಟೆಗೆ ಅನ್ನವಿಲ್ಲದ ದಾರುಣಚಿತ್ರ ಸ್ಮೃತಿಪಟಲದ ಮುಂದೆ ಚಲನಚಿತ್ರದಂತೆ ಬಂದು ನಿಲ್ಲುತ್ತದೆ. ಇಂಥ ಬಡತನ, ದಾರಿದ್ರ್ಯ ಇವುಗಳಿಗೆಲ್ಲಾ ಹುಟ್ಟಿಸಿದ ದೇವರೇ ಕಾರಣವೆನ್ನುವುದು ಸರ್ವೇಸಾಮಾನ್ಯರಲ್ಲಿ ವಾಡಿಕೆಯಾಗಿದೆ ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನಮ್ಮ ಮನಸ್ಸುಗಳು ಕಲಕಿ ಹೋಗಿವೆ. ಅದಕ್ಕೋಸ್ಕರ ನಮಗೊಂದು ದರ್ಶನ ಬೇಕು; ದಿಕ್ಕುದೆಸೆಯೊಂದು ಬೇಕು; ಧರ್ಮಸಂದೇಶ ಬೇಕು; ಭರವಸೆ ಬೇಕು. ಯಾವ ಸಂದೇಶ ವೈಶಿಷ್ಟ್ಯಪೂರ್ಣವಾದದ್ದು ಸರ್ವತ್ರ ಸಮಂಜಸವೋ, ತೃಪ್ತಿಕರವೋ, ಸತ್ಯದ ನವ್ಯ ಪ್ರಜ್ಞೆಯನ್ನು ನೀಡುವುದೋ; ಹೊಟ್ಟೆಬಟ್ಟೆಯ ಸಮಸ್ಯೆಯನ್ನು ಪರಿಹಾರ ಮಾಡುವುದೋ ಅಂತಹ

ಸಂದೇಶ ನಮಗಿಂದು ಬೇಕಾಗಿದೆ. ಅಂತಹ ವಿಶ್ವವಿಶಾಲ ಸಂದೇಶಗಳನ್ನು ಮಾನವರಿಗೆ ಸಾರಿದ ಧರ್ಮಪ್ರವಾದಿ ಬಸವೇಶ್ವರ ಮತ್ತು ಸಾಮ್ಯವಾದದ ಪ್ರಥಮಾಚಾರ್ಯ ಕಾರ್ಲ್‌ಮಾರ್ಕ್ಸ್ ಇವರ ಸಾಮ್ಯವಾದಗಳತ್ತ ಒಂದು ಪಕ್ಷಿನೋಟವನ್ನು ಬೀರೋಣ.

ಯುರೋಪ್ ದೇಶದ ಧರ್ಮಕ್ರಾಂತಿಗೆ ಕಾರಣನಾದ ಮಾರ್ಟಿನ ಲೂಥರನನ್ನು ಬಿಟ್ಟು ವಿಶಿಷ್ಟ ಧರ್ಮಪಂಥವನ್ನು ಕಟ್ಟಿದ್ದ ಗೌತಮಬುದ್ಧ, ಜಾತ್ಯತೀತ ಸಮಾಜವನ್ನು ಸ್ಥಾಪಿಸಿದ್ದ ಬಸವಣ್ಣನವರನ್ನು ಬದಿಗಿಟ್ಟರೆ. ಯಾರನ್ನು ಮಾನವೀಯ ದಿಕ್ಕನ್ನೆ ಬದಲಿಸುವ ತಿರುಗಣಿ ಎನ್ನಬಹುದೋ ಅಂತಹ ಕೆಲವೇ ವ್ಯಕ್ತಿಗಳಲ್ಲಿ ಕಾರ್ಲ್ ಮಾರ್ಕ್ಸ್‌ನೂ ಒಬ್ಬ. ಬಸವಣ್ಣ-ಮಾರ್ಕ್ಸ್ ವಿಚಾರಧಾರೆಯನ್ನು ಹರಿಸಿ ಹೋಗಿದ್ದಾರೆ ದೀನದಲಿತ ಜನತೆಗೆ ಭಾಗ್ಯವನ್ನು ತೋರಿ ಹೋಗಿದ್ದಾರೆ. ಆಧುನಿಕ ಕಮ್ಯುನಿಸ್ಟ ಮತಸಿದ್ಧಾಂತದ ಪ್ರಥಮ ಆಚಾರ್ಯ ಒಬ್ಬನಾದರೆ ಮಾನವ ಧರ್ಮವನ್ನು, ವಿಶ್ವಭ್ರಾತೃತ್ವವನ್ನು ಜನತೆಗೆ ಸರಳವಾಗಿ ತಿಳಿಸಿದ ಧರ್ಮಪ್ರವಾದಿ ಮತ್ತೊಬ್ಬ ಬಸವ ಕಿಂಕರರ ಕಿಂಕರ, ವಿರಕ್ತನಲ್ಲವಾದರೂ, ಕಡು ವಿರಕ್ತಿಗೆ ಸಮನಾದ ಮನಸ್ಸಿನ ಶೀತಳ ಶಾಂತಿಯನ್ನೂ, ಭಕ್ತಿಯ ಓಜಿಯೋಜೆಯನ್ನೂ ಪಡೆದ ಆಸ್ತಿಕ ಮಾರ್ಕ್ಸ್ ದೇವರು-ಧರ್ಮವನ್ನು ನಂಬದ ನಾಸ್ತಿಕ, ಆದರೂ ವರ್ಣರಹಿತ, ವರ್ಗರಹಿತ, ಸರ್ವಸುಖೀ ಸಮಾಜದ ಸ್ಥಾಪನೆಗೆ ಅವರು ಪಟ್ಟಿರುವ ಶ್ರಮ ಅಸದೃಶವಾದುದು.

ಬಂಡವಾಳಶಾಹಿಗೆ ಮೃತ್ಯುರೂಪವಾದ ತತ್ವ ವಿಚಾರವನ್ನು ಪ್ರತಿಪಾದಿಸಿದ ಕಾರ್ಲ್‌ಮಾರ್ಕ್ಸ್ ವಿಶ್ವದಲ್ಲಿ ಒಂದು ದೊಡ್ಡ ಚೇತನಶಕ್ತಿಯಾಗಿ ಬೆಳೆದುಬಂದಿದ್ದಾನೆ. ಜನ ಈತನ ಹೆಸರನ್ನು ಕೇಳಿದೊಡನೆ ದಿಙ್ಮೂಢರಾಗುತ್ತಾರೆ. ರಷ್ಯಾದ ಸಾಮ್ಯವಾದಿಗಳು ಈತನನ್ನು ದೇವರೆಂದು ಪೂಜಿಸುತ್ತಾರೆ ಚೀನಾದ ಕ್ರಾಂತಿಕಾರರಿಗೆ ಈತನ ಮಾತುಗಳು ವೇದವಾಕ್ಯ. ಆಫ್ರಿಕದಲ್ಲಿ ಈತನ ವಿಚಾರಗಳು ಕ್ರಾಂತಿಯ ಬೀಜವನ್ನು ಬಿತ್ತಿವೆ. ಆಸ್ಟ್ರೇಲಿಯಾದ ಶ್ರಮಿಕ ವರ್ಗಕ್ಕೆ ಈತ ಸ್ಫೂರ್ತಿಯಾಗಿದ್ದಾನೆ-ಈತನನ್ನು ಮಹರ್ಷಿ ಎಂದವರಿದ್ದಾರೆ. ಈತ ಹೇಳಿದುದು ತ್ರಿಕಾಲ ಸತ್ಯವೆಂದು ನಂಬುವವರಿದ್ದಾರೆ. ಈತನ ಬರವಣಿಗೆಯ ಒಂದೊಂದು ಶಬ್ದಕ್ಕೂ ಆಕ್ಷೇಪವನ್ನು ಎತ್ತುವವರಿದ್ದಾರೆ. ಈತನ "ಭೌತ ಪ್ರತಿಪಾದನೆ" ಯನ್ನು ಹೊಗಳುವವರಿದ್ದಾರೆ, ತೆಗಳುವವರಿದ್ದಾರೆ. ಒಟ್ಟಿಗೆ ಈತನಷ್ಟು ಚರ್ಚಾಸ್ಪದ ವ್ಯಕ್ತಿ ಇನ್ನೊಬ್ಬನಿಲ್ಲವೆಂಬುದು ಖಂಡಿತ. ಈತನನ್ನು ಬಹಳ ಜನ ತಪ್ಪಾಗಿ ತಿಳಿದುಕೊಂಡಿದ್ದಾರೆ. ಈತ ಹೇಳಿದ ಮಾತು ಒಂದು; ಜನ ಅದನ್ನು ಅರ್ಥ ಮಾಡಿಕೊಂಡ ರೀತಿ ಇನ್ನೊಂದು. ಈತನ ತತ್ವದ ನಿಜಾಂಶವನ್ನು ತಿಳಿದವರು ಇಡೀ ಪ್ರಪಂಚದಲ್ಲೇ ಕೇವಲ ಕೆಲವರು ಮಾತ್ರ. ಐತಿಹಾಸಿಕವಾಗಿ ವಿಚಾರಿಸಿದಾಗ ಪ್ರಪಂಚದಲ್ಲಿ ವರ್ಗ ಕಲಹಗಳಿದ್ದುದು ಅಲ್ಲದೆ, ಸಾಮಾಜಿಕ ಜೀವನ, ಧರ್ಮ, ಸಂಸ್ಕೃತಿ, ಸಂಪ್ರದಾಯ, ರಾಜಕೀಯ ವ್ಯವಸ್ಥೆ ಎಲ್ಲವೂ

ಆರ್ಥಿಕ ವ್ಯವಸ್ಥೆಯ ಮೇಲೆ ನಿಂತಿದೆ. ಹಣದ ಉತ್ಪಾದನೆಯ ರೀತಿನೀತಿಗಳನ್ನು ಅನುಸರಿಸಿ ಸಮಾಜದ ವ್ಯವಸ್ಥೆ ರೂಪುಗೊಳ್ಳುತ್ತದೆ, ಬದಲಾಗುತ್ತದೆ. ಅಲ್ಲದೆ ಅಧಿಕ ಉತ್ಪತ್ತಿಯಾದ ಹಣದಿಂದ "ಬಂಡವಾಳಶಾಹಿ" ಬೆಳೆಯುತ್ತದೆ. ದುಡಿಯುವವ ದುಡಿಯುತ್ತಲೇ ಇದ್ದಾನೆಯೇ ಹೊರತು, ಶ್ರಮಜೀವಿಗಳ ಜೀವನ ಉತ್ತಮಗೊಳ್ಳದೆ ಅವರ ಕಷ್ಟಕಾರ್ಪಣ್ಯ ದಿನ ದಿನಕ್ಕೆ ಉಲ್ಬಣವಾಗಿ ಸಮಾಜದಲ್ಲಿ ಸಾಮಾಜಿಕ ನ್ಯಾಯ ಇಲ್ಲದಾಗಿ ಅಶಾಂತ ವಾತಾವರಣ ಉಂಟಾಗುತ್ತದೆ. ಆದುದರಿಂದ ವರ್ಗವಿರೋಧವನ್ನು ತೊಡೆದುಹಾಕಿ ಬಂಡವಾಳಗಾರರನ್ನು ಬಗ್ಗುಬಡಿದು, ಜನರೆಲ್ಲರನ್ನೂ ಶ್ರಮಿಕರನ್ನಾಗಿ ಮಾಡಿ, ಒಡೆತನ-ಬಡತನ, ತಗ್ಗು-ದಿಣ್ಣೆಗಳನ್ನು ಸರಿಸಮಮಾಡಿ ದುಡಿಮೆಯ ಒಂದೇ ವರ್ಗದ ಸುಖೀರಾಜ್ಯ ಸ್ಥಾಪಿಸಬೇಕೆಂಬ ಉದ್ದೇಶದಿಂದ ರಚನಾತ್ಮಕ ಕ್ರಾಂತಿಯನ್ನು ಸಾರಿಹೋಗಿದ್ದಾನೆ ಕಾರ್ಲ್‌ಮಾರ್ಕ್ಸ್. ಆದುದರಿಂದ ಪ್ರೊ॥ ಜೊಡ್, ಈತನನ್ನು "ಸಮಾಜವಾದದ ತಂದೆ" ಎಂದಿದ್ದಾರೆ.

ಕಾರ್ಲ್ ಮಾರ್ಕ್ಸ್ "ಸಮಾಜವಾದದ ತಂದೆ" ಯಾದರೆ ಬಸವಣ್ಣ "ಸಮಾಜವಾದದ ತಾತ" ಎನ್ನಬಹುದು, ಯಾವ ಸಾಮಾಜಿಕ ತತ್ವವನ್ನು, ಸಮಾಜದ ನ್ಯಾಯವನ್ನು, ವರ್ಗರಹಿತ ಕಲ್ಪನೆಯನ್ನು, 'ದುಡಿಮೆಯೇ ದೇವರು' ಎಂಬ ವಿಚಾರಗಳನ್ನು ಕಾರ್ಲ್‌ಮಾರ್ಕ್ಸ್ ೧೯ ನೇ ಶತಮಾನದಲ್ಲಿ ಹೇಳಿದ್ದಾನೆ. ಇವೇ ಮುಂತಾದ ವಿಚಾರ ತತ್ವಗಳನ್ನು ಬಸವಣ್ಣ ೧೨ನೇ ಶತಮಾನದಲ್ಲಿ ನಡೆದು ನುಡಿದು ಹೋಗಿದ್ದಾನೆ. ಬಸವಣ್ಣನ ಸಮಾಜವಾದದ ತತ್ವಗಳನ್ನು ಕ್ರಮವಾಗಿ ಬರೆದಿಡಲಿಲ್ಲ. ಆತನ ತತ್ವಗಳನ್ನು ಕೃತಿ-ವಚನಗಳ ಸಾಗರದಿಂದ ಎಚ್ಚರಿಕೆಯಿಂದ ಆಯ್ದುಕೊಳ್ಳಬಹುದು. ಬಸವನ ಸಮಾಜವಾದದ ತತ್ವಗಳು ಜೀವನದ ಮೂಸೆಯಲ್ಲಿ ಬೆಂದು ಬಂದಿರುವ ಅಪರಂಜಿ ಚಿನ್ನದಂತೆ ಅಮೂಲ್ಯವಾಗಿವೆಯಲ್ಲದೆ ಅವರ ಪ್ರತಿಯೊಂದು ಸಮತಾ ತತ್ವದ ವಚನಗಳಲ್ಲೂ ಮಾನವೀಯ ದೃಷ್ಟಿ ಪ್ರಜ್ವಲಿಸಿದ್ದು ಹೃದ್ಗೋಚರವಾಗಿದೆ. ಬಸವನ ರಚನಾತ್ಮಕ ಕಾರ್ಯದ ಯೋಜನೆ, ಕೇವಲ ಧರ್ಮರಂಗಕ್ಕೆ, ರಾಜಕೀಯ ಕ್ಷೇತ್ರಕ್ಕೆ, ಕಂದಾಚಾರದ ಪ್ರತಿಕ್ರಿಯೆಗಳಿಗೇ ಮೀಸಲಾಗಿರಲಿಲ್ಲ. ಸಾಮಾಜಿಕ ಜೀವನವನ್ನು ವ್ಯಾಪಿಸಿ ಜನತೆಯನ್ನು ಬಡಿದೆಬ್ಬಿಸಿದೆ, ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಗೊಳಿಸಿದೆ. ಆದುದರಿಂದ ಅವರನ್ನು "ಭಕ್ತಿಭಂಡಾರಿ, ಜಂಗಮಪ್ರಾಣಿ, ಸಮಯನಿಷ್ಠ, ಸಮಯಾಚಾರಿ" ಎಂದು ಬಣ್ಣಿಸಿದರೆ ಮತ್ತೆ ಕೆಲವರು ಈತನನ್ನು 'ಎರಡನೆಯ ಬುದ್ಧ, ಸಮಾಜವಾದಿ, ಜಗಜ್ಯೋತಿ, ವಿಶ್ವದ ಪ್ರಥಮ ವಿಚಾರವಾದಿ' ಎಂದಿದ್ದಾರೆ. ಬಸವಣ್ಣ ಮಹಾ ಭಕ್ತನೂ, ಕರ್ಮಯೋಗಿಯೂ, ಮಾನವಕುಲ ಪ್ರೇಮಿಯೂ ಆಗಿರುವನಲ್ಲದೆ, ನಿಷ್ಠಾವಂತ ರಾಜ[illegible]ಯೂ ಉತ್ತಮ ಆರ್ಥಿಕ ಯೋಜಕನೂ ಆಗಿದ್ದನು. ಮುಖ್ಯವಾಗಿ ಇಲ್ಲಿ

ಬಸವಣ್ಣನ ಮತ್ತು ಮಾರ್ಕ್ಸ್ ಇವರ ಸಾಮಾಜಿಕ, ಆರ್ಥಿಕ ಸಿದ್ಧಾಂತಗಳ ಸಂಕ್ಷಿಪ್ತ ಸ್ವರೂಪವನ್ನು ತಿಳಿಯೋಣ.

**ಸಂಪತ್ತಿನ ಸಮಾನ ಹಂಚಿಕೆ:** ಚಾರ್ಲ್ಸ್ ಡಾರ್ವಿನ್ ಮಾನವಕುಲದ ಮೂಲವನ್ನು ಶೋಧಿಸಿ ತೆಗೆದರೆ, ಮಾರ್ಕ್ಸ್ ಮಾನವ ಜನಾಂಗದ ಚರಿತ್ರೆಯನ್ನು ಶೋಧಿಸಿದ್ದಾನೆ. ಆತನ "ಕಮ್ಯುನಿಷ್ಟ ಮೇನಿಫೆಸ್ಟೋ" ಎಂಬ ಗ್ರಂಥದಲ್ಲಿ ವರ್ಗ ವರ್ಗಗಳ ಹೋರಾಟಗಳ ನಿರೂಪಣೆಯು ವಿಶಾಲ ಚಿತ್ರಗಳನ್ನು ನಮ್ಮ ಮುಂದೆ ತೆರೆದಿಟ್ಟಿದ್ದಾನೆ. ಈ ವರ್ಗ ಕಲಹದ ಕಥೆಯೇ ನಮ್ಮ ಸಮಾಜದ ಕಥೆ; ನಮ್ಮ ನಾಗರಿಕತೆಯ ಕಥೆ. ಆದುದರಿಂದ ವ್ಯಕ್ತಿಗತ 'ಸೊತ್ತೆ' ಬಡವ ಬಲ್ಲಿದನೆಂಬ ಭೇದದ ಮೂಲ ಅದನ್ನು ತೊಡೆದುಹಾಕುವದು ಕ್ರಾಂತಿಯ ಮೂಲೋದ್ದೇಶಗಳಲ್ಲಿ ಒಂದು ಆದುದರಿಂದ ವ್ಯಕ್ತಿಗತ ಸೊತ್ತಿಗೆ ಬದಲಾಗಿ ಅದರ ಉಪಯೋಗ ಎಲ್ಲರಿಗೆ ದೊರೆಯಲು ಸಮಾಜದ ಸೊತ್ತಾಗಬೇಕೆಂದು ಅಸಂಖ್ಯಾತ್ಮರ ಕಾರ್ಮಿಕರಿಗೆ ಸುಸಂಘಟಿತರಾಗಿ ಮುಂದಿನ ಸಾಮಾಜಿಕ, ರಾಜನೈತಿಕ ಮತ್ತು ಆರ್ಥಿಕ ಕ್ರಾಂತಿಗೆ ಅಡಿಗಲ್ಲು ಹಾಕಿ ಎಂದು ವಿಚಾರ ಕ್ರಾಂತಿಯ ಕೂಗಿನಿಂದ ಶ್ರಮಿಕ ವರ್ಗವನ್ನು ಬಡಿದೆಬ್ಬಿಸಿದ್ದಾನೆ ಸಮಾಜದಲ್ಲಿ ಸಂಪತ್ತಿನ ಸಮಾನ ಹಂಚಿಕೆಗೋಸ್ಕರ ಬಸವಣ್ಣ—

ಕಡಬಡ್ಡಿಯ ಕೊಡಲಾಗದು
ಬಂದರೊಂದು ಲೇಸು, ಬಾರದಿದ್ದೊಡೆ ಎರಡು ಲೇಸು.
ಅಲ್ಲಿದ್ದರೆಯೂ ಲಿಂಗಕ್ಕೆ ಬೋನ,
ಇಲ್ಲಿದ್ದರೆಯೂ ಲಿಂಗಕ್ಕೆ ಬೋನ,
ಬಂದಿತ್ತೆಂಬ ದುಃಖವಿಲ್ಲ, ಬಾರದೆಂಬ ಪರಿಣಾಮವಿಲ್ಲ.
ಇದು ಕಾರಣ ಕೂಡಲ ಸಂಗಮದೇವ
ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು

ಎಂಬಲ್ಲಿ 'ಸೊತ್ತಿನ' ಅಧಿಕಾರಿ ಶಿವನೆಂಬುದರಿಂದ ಅದನ್ನು ಸಮಾಜ ಸೇವೆಗೆ ದಾನರೂಪದಲ್ಲಿ ಶರಣರಿಗೆ ಕೊಡಬೇಕೆಂದಿದ್ದಾರೆ.

ಆಯುಷ್ಯವುಂಟು ಪ್ರಳಯವಿಲ್ಲವೆಂದು,
ಅರ್ಥವ ಮಡುಗುವಿರಿ,
ಆಯುಷ್ಯ ತೀರಿ ಪ್ರಳಯ ಬಂದರೆ,
ಅರ್ಥವ ನುಂಬುವರಿಲ್ಲ.
ನೆಲನಗಿದು ಮಡುಗದಿರ,
ನೆಲ ನುಂಗಿದೊಡೆ ಉಗುಳುವುದೆ,

ಕಣ್ಣಿನಲಿ ನೋಡಿ, ಮಣ್ಣಿನಲಿ ನೆನಹಿ,
ಉಣ್ಣದೆ ಹೋಗದಿರ

ಎಂಬಲ್ಲಿ ಹಣವನ್ನು, ಅಗತ್ಯ ವಸ್ತುಗಳನ್ನು ನಾಳೆಗೆಂದು ಕೂಡಿಡದೆ ಅದನ್ನು ಸಮಾಜದ ಹಿತಕ್ಕೆ ಬಳಸಬೇಕೆಂದಿದ್ದಾನೆ. ಸಿರಿಯೆಂಬುದು ಶಾಶ್ವತವಲ್ಲ ಇವು ಭಕ್ತಿಯಿಂದ ದೇವರನ್ನು ತಿಳಿಯುವ ಸಾಧನಗಳಾಗಬೇಕೆಂದು ಹೇಳಿರುವಲ್ಲಿ ಕಾರ್ಲ್ ಮಾರ್ಕ್ಸ್‌ನಿಗಿಂತ ಶ್ರೇಷ್ಠವಾದ ಆರ್ಥಿಕ ಸಮಾನತೆಯ ಉದಾತ್ತ ಸಿದ್ಧಾಂತ ಪ್ರತಿಪಾದಿಸಿದ್ದಾನೆ. ಅಧಿಕ ಹಣ ಸಂಗ್ರಹವಾದಲ್ಲಿ ಶರಣರಿಗೆ ಹಂಚಬೇಕೆಂದು ಬಸವಣ್ಣನ ವಾದ. ದುಡಿಮೆಯಿಂದ ಅಧಿಕ ಲಾಭವಾದಾಗ ಬಂಡವಾಳಗಾರರ ಕೈಸೇರದೆ ಶ್ರಮಿಕ ವರ್ಗಕ್ಕೆ ಬರಬೇಕೆಂಬುದು ಮಾರ್ಕ್ಸ್‌ನ ಮತ. ಒಟ್ಟಾರೆ ಸಂಪತ್ತಿನ ಸಮಾನ ಹಂಚಿಕೆಯಾಗಬೇಕು ಎನ್ನುವಲ್ಲಿ ಉಭಯತರಲ್ಲಿ ಏಕಮತವಿದೆ.

ಸಹಕಾರ :– ಮಾರ್ಕ್ಸ್ ತನ್ನ "ಐತಿಹಾಸಿಕ ಭೌತ ಪ್ರತಿಪಾದನೆ" ಯಿಂದಲೂ, "ಸಾಮ್ಯವಾದ ಘೋಷಣೆ" ಎಂಬ ಪ್ರಬಂಧದಲ್ಲಿ ಸ್ವಾಮಿಸೇವಕ, ಸಾಮ್ರಾಜ್ಯ-ಸಾಮಾನ್ಯ-ದಣಿ-ದಾಸ, ತಂಡದಾರ–ಕೆಲಸಗಾರ ಇವರಲ್ಲಿ ಒಬ್ಬರಿಗೊಬ್ಬರು ನಿರಂತರ ವಿರೋಧದಲ್ಲಿ ನಿಂತಿದ್ದುದರಿಂದ ಪ್ರಾಚೀನ ಸಮಾಜದಲ್ಲಿ ಸಹಕಾರ ಭಾವನೆ, ಮಾನವ ವರ್ಗದಲ್ಲಿ ಇಲ್ಲದೆ ಹೋಗಿದ್ದುದರಿಂದ ಯುಗ–ಯುಗಾಂತರಗಳಿಂದ ಅನರ್ಥ ಪರಂಪರೆಯನ್ನು ತಂದೊಡ್ಡಿ ಸಮಾಜದ ಶಾಂತಿಯನ್ನು ಕದಡಿದ ನಿಜರೂಪವನ್ನು ಉತ್ಪ್ರೇಕ್ಷೆ ಮಾಡಿ ಹೇಳಿದ್ದಾನೆ ಆದ್ದರಿಂದ ಸಂಘ ಜೀವಿಯಾದ ಮಾನವನಲ್ಲಿ ಸಹಕಾರದಿಂದ ನೆರೆ–ಹೊರೆಯವರ ಕಷ್ಟ–ಕಾರ್ಪಣ್ಯಗಳನ್ನು ಅರಿತು, ಇನ್ನೊಬ್ಬರಿಗೆ ಬೇಕಾದ ಅಗತ್ಯ ವಸ್ತುಗಳನ್ನು ಹಂಚಿಕೊಳ್ಳುವ ಸಹಕಾರ ಮನೋಭಾವ, ಜಿರಬೇಕಾದರೆ ಕಾರ್ಮಿಕರಲ್ಲಿ ಆಂದೋಲನ ಮಾಡಬೇಕೆಂದು ಮಾರ್ಕ್ಸ್ ಬಯಸಿದ್ದಾನೆ.
ಇದೇ ಸಹಕಾರ ತತ್ವಗಳನ್ನು 'ಬೃತ್ಯಾಚಾರದಲ್ಲಿ' ಬಸವಣ್ಣನವರು ಮನೋಜ್ಞವಾಗಿ ವಿವರಿಸಿದ್ದಾರೆ

"ಎನಗಿಂತ ಕಿರಿಯರಿಲ್ಲ
ಶಿವಭಕ್ತರಿಗಿಂತ ಹಿರಿಯರಿಲ್ಲ"

ಎಂಬ ಮನೋಭಾವ ಬಲಿತು ತಾನು ಎಷ್ಟೇ ದೊಡ್ಡ ವ್ಯಕ್ತಿಯಾಗಲೀ ಸಮಾಜ ತನಗಿಂತ ದೊಡ್ಡದೆಂದು ತಿಳಿದು ತನ್ನ ತನು-ಮನ-ಧನಗಳನ್ನು ಸಮಾಜಸೇವೆಗೆ ಅರ್ಪಿಸಬೇಕೆಂದೂ, ಹಾಗೆಯೇ ಸಮಾಜದಲ್ಲಿ ವ್ಯಕ್ತಿತ್ವವನ್ನು ಪೂರ್ಣವಾಗಿ ಲಯಗೊಳಿಸಬೇಕೆಂದೂ ಸಾಮ್ಯವಾದದ ನಿಲುವನ್ನು ತಾಳಿದ್ದಾನೆ, ಸಮಾಜವಾದಿ ಬಸವಣ್ಣ

ಕಾಗೆ ಒಂದಗುಳ ಅನ್ನವನು ಕಂಡರೆ ಕರೆಯದೇ ತನ್ನ ಬಳಗವನು?
ಕೋಳಿ ಒಂದು ಗುಟುಕು ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲವ?

ಮಾನವನಾಗಿ ಜನಿಸಿದ ಮೇಲೆ ಅವುಗಳಿಗಿಂತಲೂ ಕಡಿಮೆಯಾಗಿ ಬಾಳದೇ ಎಲ್ಲರೂ ಹಂಚಿಕೊಳ್ಳುವ "ಸಹಕಾರ ಭಾವನೆ" ನೆಲೆಗೊಳ್ಳಬೇಕು. ಸರಳ ಶುದ್ಧ ಮಿತವ್ಯಯದ ಜೀವನ ನಡೆಸಬೇಕು ಸತ್ಯ ಪ್ರಾಮಾಣಿಕತನಗಳು ಬೆಳೆಯಬೇಕೆಂಬ ತತ್ವದ ಹಿನ್ನೆಲೆಯಲ್ಲಿ ಸಹಕಾರ ಮನೋಭಾವ ಬೆಳೆಯಲಿಕ್ಕೆ ನೈತಿಕ ಕಟ್ಟನಿಂದ ನಿರ್ಬಂಧಿಸಿದ್ದಾನೆ. 'ಸಹಕಾರದ ಮುಖಾಂತರ ಸಮಾಜದ ಬದಲಾವಣೆಯಾಗಬೇಕೆಂಬುದೇ ಬಸವಣ್ಣನ ಆಸೆ ಮಾರ್ಕ್ಸ್‌ನ ಸಹಕಾರದ ಬೋಧನೆಯಲ್ಲಿ ನೈತಿಕದ ನೆಲೆಗಟ್ಟಿಲ್ಲ. ಧರ್ಮದ ಬಂಧನವಿಲ್ಲ. ಸಹಕಾರ, ಸಮಾನತೆಯ ಮೇಲೆ ಸಮಾಜ ಬದಲಾವಣೆಯಾಗಬೇಕಾದರೆ ಕ್ರಾಂತಿಯೇ ನಿಜವಾದ ನೀತಿ, ಕ್ರಾಂತಿಯೇ ನಿಜವಾದ ಧರ್ಮ ಎಂಬ ಲೌಕಿಕ ಸಾಧನೆ ಮಾರ್ಗದತ್ತ ಹೆಚ್ಚು ಒಲವನ್ನು ತೋರಿಸಿದ್ದಾನೆ. ಆದರೆ ಬಸವಣ್ಣ "ಸಹಕಾರ ಮನೋಭಾವಕ್ಕೆ ಆಧ್ಯಾತ್ಮಿಕ ಮತ್ತು ಲೌಕಿಕ ಇವೆರಡರ ಸಹಾಯ ಅಗತ್ಯ" ಎಂದಿದ್ದಾನೆ.

**ವರ್ಗರಹಿತ ಮತ್ತು ವರ್ಣರಹಿತ ಸಮಾಜ:-** ವೇದೋಪನಿಷತ್ತುಗಳ ಕಾಲದಲ್ಲಿ ಭಾರತೀಯ ಸಮಾಜವನ್ನು ಚತುರ್ವರ್ಣದ ಮೇಲೆ ವಿಂಗಡಿಸಿರುವಂತೆ ಐರೋಪ್ಯ ಸಮಾಜದಲ್ಲಿ ವರ್ಗ ಬೇಧಗಳಿದ್ದವು ಎಂಬುದಕ್ಕೆ ಬೇಕಾದಷ್ಟು ಪ್ರಮಾಣಗಳನ್ನು ಕೊಡಬಹುದು. ಮಾರ್ಕ್ಸ್ ವರ್ಗ ಕಲಹದ ಸ್ವರೂಪವನ್ನೂ, ಅದು ಸಮಾಜದ ಮೇಲೆ ಉಂಟುಮಾಡಿದ ವಿರಾಡ್ರೂಪವನ್ನೂ ತೆರೆದು ತೋರಿಸಿ ವರ್ಗರಹಿತ ಸರ್ವಸುಖ ಸಮಾಜ ಸ್ಥಾಪನೆಗೆ ವಿಶ್ವದ ಶ್ರಮವರ್ಗಗಳೆಲ್ಲಾ ಸಂಘಟನೆ ಮಾಡಲು ಜೀವನ ಪರ್ಯಂತ ಅವಿಶ್ರಾಂತವಾಗಿ ಹೋರಾಡಿದ್ದಾನೆ. ಇವನಲ್ಲದೆ ಮಹಾಪುರುಷರಾದ ಬುದ್ಧ, ಮಹಮ್ಮದ, ಏಸು ಕ್ರಿಸ್ತ, ಲೂಥರ್, ವಿವೇಕಾನಂದ, ಪುರಂದರದಾಸರು, ಕನಕದಾಸರು, ಕಬೀರ್, ರಾಜನೀತಿಜ್ಞರೂ, ಜನನಾಯಕರಾದ ರಾಜಾರಾಮ ಮೋಹನರಾಯ್, ತಿಲಕರು, ಗಾಂಧೀಜಿಯವರು, ಅಬ್ರಾಂ ಲಿಂಕನ್, ಕೆನಡಿ ಇನ್ನೂ ಮುಂತಾದವರು ಜಾತ್ಯತೀತ ಸಮಾಜ ಸ್ಥಾಪನೆಗೆ ಹೋರಾಡಿದ್ದಾರೆ. ಬ ಸ ವ ಣ್ಣ ನೂ ಸಹ ವರ್ಣಗಳ ವಿಂಗಡನೆಯ ಮೇಲೆ ಸಮಾಜ ನಿಂತ ಕಾಲದಲ್ಲಿ ಬಾಹ್ಯಡಂಬರಾಚಾರಗಳ ಹಿಂದೂ ಧರ್ಮವನ್ನು ಹಿಂದೆ ದೂಡಿ ಕೃತ್ರಿಮ ಮೇಲು ಕೀಳುಗಳನ್ನು ಹರಡುತ್ತಿದ್ದ ಕಾಲದಲ್ಲಿ ಜಾತಿ-ಕುಲ ಗೋತ್ರಗಳ ವಿರುದ್ಧ ಕ್ರಾಂತಿಯನ್ನೆಬ್ಬಿಸಿದ್ದಾನೆ.

ಕೊಲ್ಲುವವನೆ ಮಾದಿಗ, ಹೊಲಸು ತಿಂಬುವವನೆ
ಹೊಲೆಯ,

ಸಕಲ ಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲಸಂಗನ ಶರಣರೆ ಕುಲಜರು

ಆದುದರಿಂದ ಜಾತಿಯಿಂದ ಕುಲವನ್ನು ತಿಳಿಯಬಾರದು. ಸದ್ವರ್ತನೆ ಯಿಂದ ಜಾತಿಯು ನಿರ್ಣಯವಾಗ ಬೇಕೇ ವಿನಾ ಹಣ ಮತ್ತು ಹುಟ್ಟಿನಿಂದಲ್ಲ ಎಂಬ ಸಮಾನತೆಯ ಬೀಜವನ್ನು ಬಿತ್ತಿದ್ದಾರೆ.

"ಕುಲವೊಂದೆ ತನ್ನ ತಾನರಿದವಂಗೆ"
"ಹೂಡರಸ ಮಗ ನಾನಯ್ಯ"
"ಶಿವಭಕ್ತನೇ ಕುಲಜ"
"ಹೊಲೆಯುಂಟೆ ಲಿಂಗವಿದ್ದಡೆಯಲ್ಲಿ"

ಎಂಬ ಮಾತುಗಳಲ್ಲಿ ಎಲ್ಲರೂ ಸರ್ವಸಮಾನರು. ಎಲ್ಲರೂ ದೇವನ ಮಕ್ಕಳು ಎಂದು ಕುಲದ ಸಂಕೋಲೆಯನ್ನು ಕಳಚಲು ಪ್ರಯತ್ನಿಸಿದ್ದಾರೆ.

ಉಂಬಲ್ಲಿ ಉಡುವಲ್ಲಿ ಕುಲವೇಳಿಯಿತ್ತೆಂಬಿರಿ.
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ
ವ್ಯಾದಿಗಳನೇನೆಂಬೆನಯ್ಯ

ಎಂದು ಜಾತಿ ಭಾವನೆಯನ್ನು ಕಂಡು, ನೊಂದು ಕಠಿಣವಾಗಿ ಹೇಳಿದ್ದಾರೆ.

ಉಂಬುದು ಉಡುವುದು ಶಿವಾಚಾರ
ಕೊಂಬುದು ಕೊಡುವುದು ಕುಲಚಾರವೆಂಬ
ಅನಾಚರಿಯ ಮಾತು ಕೇಳಲಾಗದು
ವಿಪ್ರಜ ಮೊದಲಾಗಿ ಅಂತ್ಯಜ ಕಡೆಯಾಗಿ
ಶಿವಭಕ್ತರಲ್ಲಿ ಒಂದೇ ಎಂಬುದು ಸದಾಚಾರ
ಉಳಿದೆಲ್ಲವು ಅನಾಚಾರವೆಂದೂ

ಜಂಗಮರಲ್ಲಿ ಕುಲವನರಸಬಾರದೆಂದೂ, ಭಕ್ತರೆಲ್ಲರೂ ಒಂದೇ ಎಂದೂ, ಪರಸ್ಪರ ಸಮಾನರೆಂದೂ ಶಿವದೀಕ್ಷೆಯನ್ನು ಯಾರು ಬೇಕಾದರೂ ಪಡೆಯಬಹುದೆಂದೂ, ಷಟ್‌ಸ್ಥಲ ಸಾಧನೆಗಳನ್ನು ಯಾರು ಬೇಕಾದರೂ ಮಾಡಬಹುದೆಂದೂ ತಿಳಿಸಿದ್ದಾರೆ. ಬಸವಣ್ಣ ನಿತ್ಯವೂ ಹರಿಜನರ ಕೇರಿಗೆ ಹೋಗಿ ಶಿವಭಕ್ತ ಸದಾಚಾರಗಳನ್ನು ಕಲಿಸುತ್ತಿದ್ದರು. ಹಾಗೆ ಒಂದು ದಿನ ಬಸವಣ್ಣ ಶಿವನಾಗಯ್ಯ ಎಂಬ ಹರಿಜನರ ಮನೆಯಲ್ಲಿ ಸಹಪಂಕ್ತಿ ಭೋಜನ ಮಾಡುತ್ತಾನೆ. ಈತನ ದ್ವೇಷಿಗಳು

ದೂರನ್ನು ಬಿಜ್ಜಳನಿಗೆ ತಿಳಿಸುತ್ತಾರೆ. ಬಿಜ್ಜಳನ ಆಸ್ಥಾನದಲ್ಲಿ ಬಸವಣ್ಣನವರು ರೀತಿ ಸಮರ್ಥಿಸಿದ್ದಾರೆ.

ಹಸುವ ಕೊಲುವಾತ ಹೊಲೆಯ,
ಹೊಲಸು ತಿನ್ನುವವ ಹೊಲೆಯ,
ಹುಸಿಯನಾಡುವವ ಹೊಲೆಯ,
ತನ್ನ ನೇಮವ ನೀಗಿ
ಅನ್ಯ ನೇಮಕ್ಕೆ ಮನವಿಟ್ಟವ ಹೊಲೆಯ.

ಹೀಗೆ ಜಾತ್ಯಾತೀತ ಸಮಾಜವಾದವನ್ನು ಆಚರಿಸಿ ತೋರಿಸಿದ ಅಣ್ಣನ ಆದರ್ಶ ಸರ್ವರಿಗೂ ಆದರ್ಶವಾಗಿದೆ. ಆಚಾರ ವ್ಯವಹಾರಗಳಲ್ಲಿ, ಊಟ-ಉಪಚಾರಗಳಲ್ಲಿ ಬಸವಣ್ಣನವರ ತತ್ವಗಳನ್ನು ಅನುಸರಿಸುವಷ್ಟರ ಮಟ್ಟಿಗೆ ಆಧುನಿಕ ಸಮಾಜ ಪರಿವರ್ತನೆಯಾಗುತ್ತಿದೆ ಆದರೆ "ಕುಲವ ನೋಡದೆ ಆಚಾರವ ನೋಡಿ ಅವರಿಗೆ ಬೇಕಾದ ಹೆಣ್ಣು ಕೊಟ್ಟು, ನಮಗೆ ಬೇಕಾದ ಹೆಣ್ಣು ತಂದಕೊಂಬುದು." ಎಂಬ ಬಸವಣ್ಣನ ತತ್ವವನ್ನು ಪೂರ್ಣ ಒಪ್ಪಿ ನೆನೆಯುವಷ್ಟರ ಮಟ್ಟಿಗೆ ನಮ್ಮ ಸಮಾಜ ಪರಿವರ್ತನೆಯಾಗಿಲ್ಲ ಇಂತಹ ಕ್ರಾಂತಿಕಾರಕವಾದ ವಿಶ್ವವ್ಯಾಪಕವಾದ ಭಾವನೆಗಳನ್ನು ಅಂದೇ ಸಮಾಜದಲ್ಲ ಬಿತ್ತಿದ್ದಾನೆ. ಇದು ಬಸವಣ್ಣನವರು ಜಾತಿಯ ಭಾವನೆಯಲ್ಲಿ ಕಂಡ ಸಮಸ್ಯೆಯ ದೃಷ್ಟಿ. ಈ ಸಮನ್ವಯ ದೃಷ್ಟಿಯ ಆಡಿಪಾಯದ ಮೇಲೆ ವರ್ಣರಹಿತ ಸಮಾಜದ ಸ್ಥಾಪನೆಗೆ ಪ್ರಯತ್ನಿಸಿದ್ದಾರೆ ಹೀಗೆಯೇ ಮಾರ್ಕ್ಸ್ ವರ್ಣರಹಿತ ಸಮಾಜರಚನೆಗೆ ಕ್ರಾಂತಿಯ ಬೀಜವನ್ನು ಶ್ರಮಿಕವರ್ಗ (Labour class) ದಲ್ಲಿ ಬಿತ್ತಿಹೋಗಿದ್ದಾನೆ ಆದರೆ ಅಣ್ಣನ "ವರ್ಗರಹಿತ ಸಮಾಜ" ಮಾರ್ಕ್ಸ್‌ನ ವರ್ಗರಹಿತ ಸಮಾಜದಂತೆ ಕೇವಲ ಲೌಕಿಕ ಮತ್ತು ಆರ್ಥಿಕವಲ್ಲ. ಅದು ಪಾರಮಾರ್ಥಿಕವೂ, ನೈತಿಕವೂ, ಧಾರ್ಮಿಕವೂ ಸತ್ಯದ ಆಧಾರದ ಮೇಲೆ ಬೆಳೆದದ್ದೂ ಆಗಿದೆ.

ದುಡಿಮೆ ಮತ್ತು ಕಾಯಕ :-ದುಡಿಮೆ ಎಂದರೆ ಜೀವನೋಪಾಯಕ್ಕಾಗಿ ಕೈಗೊಂಡ "ವೃತ್ತಿ". ಈ ವೃತ್ತಿಯನ್ನು ಬಸವಣ್ಣ ವಿಶಾಲಾರ್ಥದಲ್ಲಿ "ಕಾಯಕ" ವೆಂದಿದ್ದಾರೆ. ಅಲ್ಲದೆ ವೃತ್ತಿಗೆ ಲೌಕಿಕದ ಜೊತೆಗೆ ಆಧ್ಯಾತ್ಮದ ಮೆರಗನ್ನು ಕೊಟ್ಟಿದ್ದಾರೆ. ಮಾರ್ಕ್ಸ್‌ನಿಗೆ ವೃತ್ತಿ ಕೇವಲ ಲೌಕಿಕ ಮಾತ್ರ- ಸಾಮ್ಯವಾದದ ಸಮಾಜದಲ್ಲಿ ದೃಢಕಾಯನಾದ ಪ್ರತಿಯೊಬ್ಬನೂ ತನ್ನ ಅನ್ನ, ಬಟ್ಟೆಗಳ ಸಂಪಾದನೆಗೆ ದುಡಿಯಲೇಬೇಕು. ಪ್ರತಿಯೋರ್ವನು ಶ್ರಮಜೀವಿಯಾಗಿಯೇ ಬಾಳನ್ನು ನಡೆಸಿ, ಸಾಮಾಜಿಕ ನ್ಯಾಯಕ್ಕೆ (Social Justice) ತಲೆಬಾಗಿ ನಡೆಯಬೇಕೆಂದೂ ವ್ಯಕ್ತಿಯ ಸಂಪೂರ್ಣ ಸ್ವತಂತ್ರವನ್ನು ಸಾಮಾಜಿಕ ಹಿತಕ್ಕೆ ಬಳಸಬೇಕೆಂಬ ಕಾನೂನಿನ ಕಟ್ಟಳೆ

ಯಿಂದ ವ್ಯಕ್ತಿಗಳನ್ನು ನಿರ್ಬಂಧಿಸಿದೆ. ವೀರಶೈವ "ಸದಾಚಾರ"ದಲ್ಲಿ ಕಾಯಕಕ್ಕೆ ಹೆಚ್ಚು ಪ್ರಶಸ್ತಿಯನ್ನು ಕೊಡಲಾಗಿದೆ ಆದರೆ ವ್ಯಕ್ತಿಗಳ ಕಾಯಕ ಮತ್ತು ನಡವಳಿಕೆಗೆ ಸಂಹಾರವೆಂಬ ನೈತಿಕ ಕಟ್ಟಳೆ ಮಾತ್ರವಿದೆ ಬಸವಣ್ಣನ "ಕಾಯಕವೇ ಕೈಲಾಸ", ಎಂಬ ಶ್ರೇಷ್ಠತತ್ವದಲ್ಲಿ ದುಡಿಮೆ ಮೋಕ್ಷದ ಮಾರ್ಗವೆಂದು ದುಡಿಮೆಯ ಗೌರವವನ್ನು ಹೆಚ್ಚಿಸಿದ್ದಾರೆ. ಸಮಾಜ ಸತ್ವಸಂಪೂರ್ಣವಾಗಬೇಕಾದರೆ ಪ್ರತಿಯೊಬ್ಬನೂ ಉದ್ಯೋಗ ದಲ್ಲಿ ನಿರತನಾಗಬೇಕೆಂದಿದ್ದಾರೆ.

ಅನ್ಯರ ಮನೆಗೆ ಹೋಗಿ
ತನ್ನುದರವ ಹೊರೆಯದ
ಅಚ್ಚ ಶರಣರ ಕಂಡರೆ
ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆ

ಎನ್ನುವಲ್ಲಿ ಶ್ರಮಜೀವಿಯಾಗಿ ಜೀವನ ನಡೆಸಬೇಕೆಂಬ ತತ್ವವಿದೆ.

ಕೃಷಿ, ಕೃತ್ಯ ಕಾಯಕದಿಂದಾದೊಡೇನು ?
ತನುಮನವ ಬಳಲಿಸಿ ತಂದು
ದಾಸೋಹವ ಮಾಡುವ ಪರಮ ಸದ್ಭಕ್ತನ
ಪಾದವ ತೋರಯ್ಯ ಎನಗೆ
ಅದೆಂತೆದರೆ ಆತನ ತನುಶುದ್ಧ
ಆತನ ಮನಶುದ್ಧ ಆತನ ನಡೆಶುದ್ಧ
ನುಡಿ ಎಲ್ಲ ಪಾವನವು
ಆತಂಗೆ ಉಪದೇಶ ಮಾಡಿದಾತ
ಪರಮ ಸದ್ಗುರು

ಎಂದು ಕಾಯಕದ ಹಿರಿಮೆಯನ್ನು ಹೊಗಳಿದ್ದಾರೆ. ಕಾಯಕದಿಂದ ಸಮಾಜಕ್ಕೆ ಹಿತ ವಾಗಬೇಕು ಎಂಬ ಮಾನವೀಯ ದೃಷ್ಟಿಯನ್ನು ತಾಳಿದ್ದಾರೆ.

ಕಾಸಿ ಕಮ್ಮಾರನಾದ
ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ
ವೇದವನೋದಿ ಹಾರುವನಾದ
ಇದು ಕಾರಣ ಕೂಡಲ ಸಂಗಮದೇವ
ಲಿಂಗ ಸಂಗವ ಅರಿತವನೇ ಕುಲಜನು

ಎಂಥೂ ವ್ಯಕ್ತಿಗಳಲ್ಲಿ ಮೇಲು–ಕೀಳು ಎಂಬುದಿಲ್ಲ. ವ್ಯಕ್ತಿಯಿಂದ ವ್ಯಕ್ತಿಯು ಬೆ ಯನ್ನು ಕಟ್ಟಲಾಗದು ಎಂಬ ಬಸವನ "ಕರ್ಮಯೋಗ" ದ ಸಿದ್ಧಾಂತ ಸರ್ವಶ್ರೇ ವಾದದ್ದು. ಏಕೆಂದರೆ ವಿವೇಕಾನಂದರು ಕರ್ಮಯೋಗದಿಂಡ ಶ್ರೇಷ್ಠತೆಯನ ವಿವರಿಸುವಾಗ ಮಾರ್ಗವನ್ನು ಅಥವಾ ವ್ಯಕ್ತಿಯನ್ನು ಗಮನಿಸದೆ ಕೇವಲ ಉತ್ತಮ ಧ್ಯೇಯುವನ್ನೇ ಪ್ರಧಾನವಾಗಿ ಸ್ವೀಕರಿಸಿದ್ದಾರೆ. ವಿವೇಕಾನಂದರ ದೃಷ್ಟಿಯಲ್ಲಿ ವ್ಯ ಯ ಧ್ಯೇಯ ಉತ್ತಮವಾದುದರಿಂದ ದಾರಿಯನ್ನು ಗಮನಿಸುವುದಿಲ್ಲ. ಭಗವದ್ಗೀ ಯೂ ಅಂತೆಯೇ ಶ್ರೇಷ್ಠಗುರಿಯ ಕಡೆಗೆ ಮಹತ್ವವನ್ನು ನೀಡಿದೆ. ಬಂಧು–ಬಾಂಧ ರನ್ನು ನೋಡಿ ಅರ್ಜುನ ಯುದ್ಧ ಮಾಡುವುದಿಲ್ಲವೆಂದೂ ತನ್ನ ಬಿಲ್ಲು ಬತ್ತಳಿಕೆಯನ ಕೆಳಗಿಟ್ಟು ನಿಂತಾಗ ಶ್ರೀಕೃಷ್ಣ "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನಂ ಎಂದು ಕ್ಷತ್ರಿಯ ವೃತ್ತಿಯನ್ನು ಮಾಡು, ಅದು ನಿನ್ನ ವೃತ್ತಿ; ಅದರ ಫಲದಿಂದ ವೃತ್ತಿ ಯ ಹಿರಿಮೆ ನಿರ್ಣಯವಾಗಬೇಕೇ ಹೊರತು ಕೇವಲ ವೃತ್ತಿಯಿಂದಲ್ಲ ಎಂಬ ತತ್ವ ವನ್ನು ತಿಳಿಸಿದ್ದಾನೆ. ಆಧುನಿಕ ಯುಗಕ್ಕೆ ಬಂದರೆ ರಾಜ್ಯಶಾಸ್ತ್ರಜ್ಞ ಮೆಕ್ಯವಲ್ಲಿ (Machiavelli), ಭಾರತೀಯ ರಾಜ್ಯನೀತಿಜ್ಞ ಕೌಟಿಲ್ಯ, ಕಾರ್ಲ್ ಮಾರ್ಕ್ಸ್ ಇವರೆಲ್ಲರಿಗೂ ಗುರಿಯ ಶ್ರೇಷ್ಠತೆಯೇ ಪ್ರಧಾನ. ಅದನ್ನು ತಲುಪುವ ಸಾಧನೆಗಳ ಗುಣದೋಷಗಳು ಅವರಿಗೆ ಬೇಕಿಲ್ಲ. ಆದರೆ ಬಸವಣ್ಣನ ವಿವೇಕಯುತ "ಕರ್ಮ ಯೋಗದ" ವಿಚಾರ ಅವರೆಲ್ಲರ ವಿಚಾರಕ್ಕಿಂತ ಸರ್ವೋತ್ತಮವಾಗಿದೆ. ಏಕೆಂದರೆ ಕಾಯಕಕ್ಕೆ ಸಂಬಂಧಿಸಿದಂತೆ ಗುರಿಯ ಸತ್ಯದ ಜೊತೆಗೆ ಮಾರ್ಗ ಶುದ್ಧಿಯೂ ಇರ ಬೇಕೆಂದು ತಿಳಿಸಿ ಸತ್ಯ ಶುದ್ಧ ಕಾಯಕವನ್ನು ಮಾಡಬೇಕೆನ್ನುತ್ತಾರೆ. ದಾರಿಯೂ ಗುರಿಯೂ ಸತ್ಯ ಶುದ್ಧವಾದರೆ, ಯಾವ ಕಾಯಕವೂ ಕೀಳಲ್ಲ ಎಂದು ಸೂಚಿಸಿದ್ದಾರೆ. ಅಂತೆಯೇ ಕಲ್ಯಾಣದಲ್ಲಿ ಮಡಿವಾಳ ಮಾಚಯ್ಯ ದೇವರು, ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ, ಚಮ್ಮಾರ ಹರಳಯ್ಯ, ನುಲಿಯ ಚಂದಯ್ಯ ಮುಂತಾದ ಕರ್ಮನಿರತ ಮಹಾನುಭಾವರು ಸರ್ವ ಸಮಾನತೆಯಿಂದ ಬಾಳಿ ಬೆಳಗಿದ ಜ್ವಲಂತ ಪ್ರಮಾಣಗಳಿಂದ ಬಸವನ ಕರ್ಮಯೋಗದ ಶ್ರೇಷ್ಠತೆಯನ್ನು ತಿಳಿಯಬಹುದು. ಒಟ್ಟಾರೆ ಸಮಾಜದಲ್ಲಿ ಪ್ರತಿಯೊಬ್ಬನೂ ದುಡಿಯಲೇಬೇಕೆಂಬ ಸಾಮ್ಯವಾದದ ತತ್ವ ದಂತೆ "ಬಸವನ ಕಾಯಕದ ತತ್ವ".

## ಮಹಾದೇವಿಯಕ್ಕನ ವಚನಗಳು

ತನ್ನ ವಿನೋದಕ್ಕೆ ತಾನೆ ಸೃಷ್ಟಿಸಿದ ಸಕಲ ಪ್ರಪಂಚವನು. ತನ್ನ ವಿನೋದಕ್ಕೆ ತಾನೇ ತಿರುಗಿಸಿದ ಅನಂತ ದುಃಖಂಗಳಲ್ಲಿ. ಇಂತೆನ್ನ ಚನ್ನಮಲ್ಲಿಕಾರ್ಜುನ ದೇವನೆಂಬ ಪರಶಿವನು ತನ್ನ ಜಗದ್ವಿಲಾಸ ಸಾಕಾದಡೆ ಮತ್ತೆ ತಾನೇ ಪರಿವನದರ ಮಾಯಾಪಾಶವನು.

# ಬುದ್ಧ — ಬಸವ — ಗಾಂಧಿ

—ಶ್ರೀ ಎನ್. ಬಸವರಾಧ್ಯರು

ಉಪನಿರ್ದೇಶಕರು : ಕನ್ನಡ ಅಧ್ಯಯನ ಸಂಸ್ಥೆ — ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

[ವಿಶ್ವದ ಚರಿತ್ರೆಯನ್ನು ಅವಲೋಕಿಸಿದಾಗ ಮಾನವ ಕೋಟಿಯ ಕಲ್ಯಾಣಕ್ಕಾಗಿ ಹೋರಾಡಿದ ಮಹಾನ್ ವ್ಯಕ್ತಿಗಳ ಪಂಕ್ತಿಯಲ್ಲಿ ಭರತ ಖಂಡದ ಬುದ್ಧ—ಬಸವ—ಗಾಂಧಿ—ಈ ತ್ರಿಮೂರ್ತಿಗಳು ಇನ್ನೂ ತೇಜೋಮಯ ವಿಶ್ವಾಚಾರ್ಯರಾಗಿ ಕಂಗೊಳಿಸುತ್ತಾರೆಂದೂ, ಅವರು ದೀನ ದಲಿತರ ಹಾಗೂ ಸಕಲ ಜೀವ ಕೋಟಿಯ ಉದ್ಧಾರಕ್ಕಾಗಿ ವಿವಿಧ ಕ್ಷೇತ್ರಗಳಲ್ಲಿ ಕೈಗೊಂಡ ಕಾರ್ಯಗಳು ಮತ್ತು ನೀಡಿದ ಸಂದೇಶಗಳು ಇಂದಿಗೂ ನಮಗೆ ಮೇಲ್ಪಂಕ್ತಿಯಾಗಿವೆಯೆಂದೂ—ಶ್ರೀ ಎನ್. ಬಸವರಾಧ್ಯರು ಈ ಲೇಖನದಲ್ಲಿ ತುಲನಾತ್ಮಕವಾಗಿ ಸ್ಪಷ್ಟತೆಯಿಂದ ವಿಮರ್ಶಿಸಿದ್ದಾರೆ. —ಸಂ]

ಭರತಖಂಡವು ಧರ್ಮಪ್ರಧಾನವಾದ ದೇಶ. ಅನಾದಿ ಕಾಲದಿಂದ ಈ ದೇಶದಲ್ಲಿ ಅನೇಕ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಕರು ಜನ್ಮವೆತ್ತಿ ಈ ದೇಶದ ಜನತೆ ಸನ್ಮಾರ್ಗದಲ್ಲಿ ವರ್ತಿಸಲು ಕಾರಣಕರ್ತರಾಗಿದ್ದಾರೆ. ಇವರು 'ಸರ್ವೇ ಜನಾಃ ಸುಖಿನೋ ಭವನ್ತು' ಎಂಬ ಆರ್ಯೋಕ್ತಿಯಂತೆ ಮಾನವ ಜನಾಂಗದ ಕಲ್ಯಾಣಕ್ಕಾಗಿ ತಮ್ಮ ತನುಮನಧನಗಳನ್ನು ಧಾರೆಯೆರೆದಿದ್ದಾರೆ. ಇವರಲ್ಲಿ ಗೌತಮ ಬುದ್ಧ, ವಿಶ್ವಬಂಧು ಬಸವಣ್ಣ ಮತ್ತು ಮಹಾತ್ಮಗಾಂಧಿ ಪ್ರಮುಖರು, ಪ್ರಸಿದ್ಧರು. ಈ ಮೂವರು ಭರತಖಂಡದ ತ್ರಿಮೂರ್ತಿಗಳೆಂದು ಪ್ರಖ್ಯಾತರಾಗಿದ್ದಾರೆ. ಲೋಕಹಿತಾರ್ಥವಾಗಿ ಇವರು ಕೈಗೊಂಡ ಕಾರ್ಯಗಳು ಸಾರ್ವತ್ರಿಕವೂ ಸಾರ್ವಕಾಲಿಕವೂ ಆದವು. ಈ ವಿಶ್ವಾಚಾರ್ಯರು ತೋರಿದ ಮಾರ್ಗದಲ್ಲಿ ನಡೆದ ಈ ದೇಶದ ಜನತೆ ಸನ್ಮತಿಯನ್ನೂ ಸದ್ಗತಿಯನ್ನೂ ಪಡೆದುಕೊಂಡಿತು. ಈ ಮೂವರು ವಿಭೂತಿ ಪುರುಷರ ಆಲೋಚನಾ ಶಕ್ತಿ ಏಕರೀತಿಯದಾದರೂ ಮಾನವ ಜನಾಂಗದ ಉದ್ಧಾರಕ್ಕೂ ಉತ್ಥಾನಕ್ಕೂ ಅವರು ಕೈಗೊಂಡ ಮಾರ್ಗಗಳು ಭಿನ್ನವಾಗಿವೆ. ಗೌತಮ ಬುದ್ಧ ಪರಿನಿರ್ವಾಣ ಹೊಂದಿ ಇಂದಿಗೆ ಸುಮಾರು ಇಪ್ಪತ್ತೈದು ಶತಮಾನಗಳು ಕಳೆದಿದ್ದರೂ ಮಾನವ ಜನಾಂಗದ ಮೇಲೆ ಆತನು ಬೀರಿರುವ ಪ್ರಭಾವ ಇನ್ನೂ ಮಸುಳಿಸಿಲ್ಲ. ಆತನು ಬೋಧಿಸಿದ ದಿವ್ಯತತ್ವಗಳು ಪ್ರಗತಿಪರವಾಗಿ ಸರ್ವರಿಗೂ ಸರ್ವಕಾಲದಲ್ಲಿ ಆದರ್ಶಪ್ರಾಯವಾಗಿವೆ, ಚಿರವಿನೂತನವಾಗಿವೆ. ಮೇಲ್ಪಂಕ್ತಿಯಾಗಿವೆ, ಆಕರ್ಷಣೀಯವಾಗಿವೆ.

ಗೌತಮಬುದ್ಧ ಲೋಕ ಕಲ್ಯಾಣಕ್ಕಾಗಿ ಜನ್ಮವೆತ್ತಿದ ವಿಭೂತಿಪುರುಷ ಆತನು ಜೀವನದ ಜಂಜಾಟದಲ್ಲಿ ತೊಳಲುತ್ತಿದ್ದ ಮಾನವಕೋಟಿಯ ಕಷ್ಟಕಾರ್ಪಣ್ಯಗಳನ್ನು ಕಂಡು ಮರುಗಿ, ಅವರ ಆತ್ಮೋದ್ಧಾರಕ್ಕಾಗಿ ತನುಮನಧನಗಳನ್ನು ಧಾರೆಯೆರೆದಿದ್ದಾನೆ. ಅಷ್ಟೇ ಅಲ್ಲ, ಅದಕ್ಕಾಗಿ ರಾಜ್ಯವನ್ನೂ ಕೈ ಹಿಡಿದ ಹೆಂಡತಿಯನ್ನೂ ಪ್ರೀತಿಯ ಮಗನನ್ನೂ, ಬಂಧು ಬಾಂಧವರನ್ನೂ ಪರಿತ್ಯಜಿಸಿದನು. 'ಅಹಿಂಸಾ ಪರಮೋಧರ್ಮಃ' ಎಂಬ ವಿಶಿಷ್ಟತತ್ವವನ್ನು ಸಾರಿ ತೋರಿದನು. ಬೌದ್ಧಧರ್ಮವು ವಿಶ್ವದ ಶ್ರೇಷ್ಠ ಧರ್ಮಗಳಲ್ಲಿ ಒಂದು ಎಂಬುದನ್ನು ಪಾಶ್ಚಾತ್ಯ ತತ್ವಜ್ಞಾನಿಗಳು ಒಪ್ಪಿಕೊಂಡಿದ್ದಾರೆ.

ಬುದ್ಧನ ದೃಷ್ಟಿಯಲ್ಲಿ ಮಾನವತ್ವದ ಕಲ್ಪನೆ ಜನಾಂಗ ಮತ್ತು ರಾಷ್ಟ್ರಗಳ ಎಲ್ಲೆಯನ್ನು ಮೀರಿದ್ದು ಕಳಂಕರಹಿತನಾಗಿ ಆತ್ಮ ದೀಪದ ನೆರವಿನಿಂದ ತನ್ನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳಬಲ್ಲ ಸ್ವತಂತ್ರಪುರುಷನ ಆವಿರ್ಭಾವದ ಗುರಿಯೇ ಬುದ್ಧನ ದೃಷ್ಟಿಯಾಗಿತ್ತು. ಬುದ್ಧ ವೈದಿಕ ಧರ್ಮವಲ್ಲಿ ಅಂದು ಪ್ರಚಾರದಲ್ಲಿದ್ದ ಯಜ್ಞ ಯಾಗಾದಿಗಳನ್ನೂ, ಪಶುವಧೆ ನರವಧೆಗಳನ್ನೂ, ಚಾತುರ್ವರ್ಣ್ಯ ಸಂಕೋಲೆಗಳನ್ನೂ ಖಂಡಿಸಿದನು; ಅಹಿಂಸೆಯ ಸಿರಿಕಹಾದಿಯನ್ನು ತೆರೆದು ಸಮತಾವಾದದ ಒಂದು ನಿರ್ದಿಷ್ಟ ನೀತಿಯನ್ನು ಪ್ರತಿಪಾದಿಸಿದನು. ಸ್ತ್ರೀಯರ ಧಾರ್ಮಿಕ ಪಾರತಂತ್ರ್ಯವನ್ನು ಕಿತ್ತೊಗೆದು ಒಂದು ಕ್ರಾಂತಿಯನ್ನು ಮಾಡಿದನು. ಈ ಎಲ್ಲ ವಿಶ್ವ ತತ್ವಗಳಿಂದ ಕೂಡಿದ ಬೌದ್ಧಧರ್ಮ ಸರ್ವಾದರಣೀಯವಾಯಿತು. ಅನೇಕ ರಾಜರು ಈ ಧರ್ಮವನ್ನು ಅನುಸರಿಸಿ ಅದಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟರು. ಇವರಲ್ಲಿ ಅಜಾತಶತ್ರು, ಬಿಂಬಸಾರ, ಅಶೋಕ ಮುಖ್ಯರಾದವರು. ಅಶೋಕ ಚಕ್ರವರ್ತಿ ಬೌದ್ಧ ಧರ್ಮದ ಉದಾತ್ತ ತತ್ವಗಳಿಗೆ ಮಾರುಹೋಗಿ, ಸ್ವದೇಶದಲ್ಲಿ ಮಾತ್ರವಲ್ಲದೆ ವಿದೇಶದಲ್ಲಿಯೂ ಇದನ್ನು ಪ್ರಚುರಪಡಿಸಿದನು ಆತನ ಪ್ರಯತ್ನದ ಫಲವಾಗಿ ಬೌದ್ಧ ಧರ್ಮವು ಸಿಂಹಳ ದ್ವೀಪ ಬರ್ಮಾ, ನೇಪಾಳ, ಲಾವೋಸ್, ಕಾಂಬೋಡಿಯಾ, ಚೀನಾ, ಜಪಾನ್, ಸಿಕ್ಕಿಂ, ಭೂತಾನ, ಇಂಡೋನೇಷ್ಯಗಳಲ್ಲೆಲ್ಲಾ ಹರಡಿ ಈಗಲೂ ಜೀವಂತವಾಗಿವೆ ಸ್ವಾಮಿ ವಿವೇಕಾನಂದ, ಮಹಾತ್ಮಗಾಂಧಿ, ಪಂಡಿತಜವಹರಲಾಲ್ ನೆಹರೂ—ಮೊದಲಾದ ಪ್ರತಿಭಾನ್ವಿತರು ಬೌದ್ಧಧರ್ಮದ ಉಚ್ಚನೀತಿಯಿಂದ ಉತ್ತೇಜಿತರಾಗಿ ಅದನ್ನು ಅನುಷ್ಠಾನಕ್ಕೆ ತರುವುದಕ್ಕೆ ಪ್ರಯತ್ನಿಸಿದ್ದಾರೆ.

ಗೌತಮ ಬುದ್ಧ ಅಜ್ಞಾನ ಮೌಢ್ಯ ಅಂಧಕಾರಗಳಲ್ಲಿ ಮುಳುಗಿದ್ದ ಮಾನವಕೋಟಿಗೆ ತಾನು ತಿಳಿದ ಜ್ಞಾನವನ್ನು ಬೋಧಿಸಿದನು. ಅವರ ಉದ್ಧಾರಕ್ಕಾಗಿ ತನ್ನ ಜೀವಿತದ ಉಳಿದ ಕಾಲವನ್ನೆಲ್ಲ ವಿನಿಯೋಗಿಸಿದನು. ಆತನ ಉಪದೇಶದ ಸಾರಾಂಶ ಇಷ್ಟೇ: ಜೀವನ ದುಃಖಮಯವಾದುದು; ಹುಟ್ಟುಸಾವುಗಳೂ, ರೋಗರುಜಿನಗಳೂ,

ಹಿತಸಹವಾಗದ ಹಿತವಿಯೋಗಗಳೂ ಮನುಷ್ಯರನ್ನು ಸದಾ ಕಾಡುತ್ತವೆ. ದುಃಖಕ್ಕೆ ಮೂಲ ಕಾರಣ ಆಸೆ. ಈ ಆಸೆಯನ್ನು ತ್ಯಜಿಸುವುದಕ್ಕಾಗಿ ಅಜ್ಞಾನದಮೌಢ್ಯಗಳನ್ನು ದೂರೀಕರಿಸಿ ಸನ್ಮಾರ್ಗದಲ್ಲಿ ನಡೆಯಬೇಕು ಸದವಲೋಕನ, ಸದವಧಾನ, ಚ್ಚಿಂತನ, ಸತ್ಪ್ರಯತ್ನ, ಸತ್ಕಾಂಕ್ಷೆ, ಸದ್ವರ್ತನೆ, ಸದುಕ್ತಿ ಮತ್ತು ಸಜ್ಜೀವನೋಪಾಯಗಳನ್ನು ಅನುಸರಿಸಿ ಅಹಿಂಸಾ ಮಾರ್ಗದಲ್ಲಿ ನಡೆದು ಆಸೆಯನ್ನು ದೂರಮಾಡಬೇಕು. ಸುಳ್ಳು ಹೇಳದೆ' ಬೇರೆಯವರ ಮನಸ್ಸನ್ನು ನೋಯಿಸದೆ, ಸತ್ಯದಿಂದಲೂ ಕರುಣೆಯಿಂದಲೂ ಬಾಳಬೇಕು. ಪ್ರಾಣಿಹಿಂಸೆಯನ್ನು ಎಂದಿಗೂ ಮಾಡಬಾರದು. ಮಾಂಸಾಹಾರವನ್ನೂ ಮಾದಕ ಪದಾರ್ಥಗಳನ್ನೂ ತ್ಯಜಿಸಬೇಕು. ಸೋಮಾರಿತನವನ್ನೂ ಹೀನವೃತ್ತಿಯನ್ನೂ ಬಿಟ್ಟು ಸದ್ಗುಣಗಳಿಂದ ಸನ್ಮಾರ್ಗದಲ್ಲಿ ನಡೆಯುವುದನ್ನು ಕಲಿಯಬೇಕು. ಯಾರಿಗೂ ಕೆಟ್ಟದ್ದನ್ನು ಬಯಸದೆ, ಎಲ್ಲರಿಗೂ ಹಿತಕರವಾಗುವಂತೆ ಸಚ್ಚಾರಿತ್ರದಿಂದ ನಡೆದರೆ, ಪೂರ್ಣಸಿದ್ಧಿ ದೊರೆತು ಜೀವನದ ಕಷ್ಟಪರಂಪರೆಗಳಿಂದ ಬಿಡುಗಡೆಯಾಗುವುದು.

ಬುದ್ಧ ತನ್ನ ಜೀವನ ಪರ್ಯಂತ ಧರ್ಮಬೋಧನೆಯನ್ನು ಮಾಡಿ ಮಾನವರ ಕಲ್ಯಾಣ ಮಾರ್ಗವನ್ನು ತೋರಿದ್ದಾನೆ. ಅತನು ಸಾರಿದ ವಿಶ್ವಪ್ರೇಮ, ಸದಾಚಾರ, ಸದ್ಭಾವನೆಗಳು ಇಡೀ ಮಾನವ ಜಗತ್ತಿಗೇ ಮಾನ್ಯವಾಗಿವೆ. ಶೀಲ ಶುದ್ಧತೆಗಳಿಂದ ಕೂಡಿದ ಪ್ರೇಮ ದಯೆಗಳ ಆದರ್ಶ ನೀತಿಯೇ ವಿಶ್ವನೀತಿಯೆಂದು ಸಾರಿ ಜಗತ್ತಿನ ದೃಷ್ಟಿಯನ್ನೇ ತನ್ನತ್ತ ಕೇಂದ್ರೀಕರಿಸಿಕೊಂಡ ಬುದ್ಧದೇವನು ಧರ್ಮದಾನಿಯಾಗಿ ರಾರಾಜಿಸಿದ್ದಾನೆ.

ಮಾನವ ಕಲ್ಯಾಣಕ್ಕಾಗಿ ಬುದ್ಧನ ತರುವಾಯ ಜನ್ಮತಾಳಿದ ಭಗವಾನ್ ಬಸವೇಶ್ವರರು ನಂದೀಶ್ವರನ ಅಪರಾವತಾರರೆಂದು ಖ್ಯಾತರಾಗಿದ್ದಾರೆ. ಅವರು ಮಾನವರ ಉದ್ಧಾರಕ್ಕಾಗಿ ಮರ್ತ್ಯದಲ್ಲಿ ಜನಿಸಿ ತಮ್ಮ ಜೀವಮಾನವನ್ನೆಲ್ಲ ಅದಕ್ಕಾಗಿ ಸವೆಸಿದ್ದಾರೆ. ಧಾರ್ಮಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಅವರು ಕೈಗೊಂಡ ಕ್ರಾಂತಿಕಾರಕ ಮಾರ್ಗಗಳು ಇತರರಿಗೆ ಮಾರ್ಗದರ್ಶಕವಾಗಿವೆ. ಬುದ್ಧ ಸತ್ಯ ಅಹಿಂಸೆಗಳ ಆಧಾರದ ಮೇಲೆ ಸಮತಾವಾದದ ಒಂದು ನಿರ್ದಿಷ್ಟ ನೀತಿಯನ್ನು ಪ್ರತಿಪಾದಿಸಿ ವರ್ಣಾಶ್ರಮ ಪದ್ಧತಿಯನ್ನು ಖಂಡಿಸಿ ಗುಣಶೀಲಗಳ ಮೇಲ್ಮೆಯನ್ನು ಎತ್ತಿಹಿಡಿದನು. ಆದರೆ ಜ್ಞಾನಪ್ರಧಾನವಾದ ಬೌದ್ಧಮತವು ಈ ದೇಶದಲ್ಲಿ ನೆಲೆಯಾಗಿ ನಿಲ್ಲಲಿಲ್ಲ. ವೈದಿಕ ಧರ್ಮ ಶಿಥಿಲವಾಗಿ, ಬೌದ್ಧ ಜೈನಧರ್ಮಗಳ ಪ್ರಭಾವ ಜನತೆಯಲ್ಲಿ ಕುಗ್ಗುತ್ತಿದ್ದ ಸಮಯದಲ್ಲಿ ವಿಚಾರಪರರಾದ ಬಸವಣ್ಣನವರು ತಮ್ಮ ಪ್ರತಿಭೆಯಿಂದಲೂ ಪ್ರಗತಿಪರ ಮನೋಭಾವನೆಯಿಂದಲೂ ಪ್ರವರ್ಧಮಾನಕ್ಕೆ

ಬಂದರು. ವರ್ಣಾಶ್ರಮಧರ್ಮಗಳ ಸಂಕೋಲೆಗಳಿಂದ ಸಮಾಜವನ್ನು ಬಿಡ ಪುನರುಜ್ಜೀವನಗೊಳಿಸಿ, ಸಮತಾಭಾವದ ಉನ್ನತ ಸಾಮಾಜಿಕ ನೀತಿಯನ್ನು ಪ್ರ ಪಾದಿಸಿ ಅಂಧಕಾರದಲ್ಲಿ ತೊಳಲುತ್ತಿದ್ದ ಜನತೆಗೆ ಮಾರ್ಗವನ್ನು ತೋರಿಸಿದರು.

ಬಸವಣ್ಣನವರದು ಮುಖ್ಯವಾಗಿ ಸರ್ವೋದಯ ದೃಷ್ಟಿ. ಸಮಾಜದಲ್ಲಿ ವರ್ಣಭೇದಗಳು ಅಳಿಯಬೇಕು. ಕೀಳು ಮೇಲೆಂಬ ಭಾವನೆ ನಿರ್ಮೂಲವಾಗಬೇಕು ಕೇವಲ ಹುಟ್ಟಿನಿಂದಲೇ ಮನುಷ್ಯನ ಯೋಗ್ಯತೆಯನ್ನು ಅಳೆಯದೆ ಗುಣದಿಂ ನಿರ್ಧರಿಸುವುದು ಉತ್ತಮವಾದ ಮಾರ್ಗ. ಧರ್ಮ ತತ್ವಗಳು ಸರ್ವರಿಗೂ ಸಮನಾ ಸೇರಿರುತ್ತವೆ. ಅವು ಕೆಲವಾರು ಪಂಡಿತರ ಅಥವಾ ಮನೆತನಗಳ ಸ್ವತ್ತಲ್ಲ ಸ್ವಪ್ರತಿಷ್ಠೆಗೂ ಸ್ವಾರ್ಥಕ್ಕೂ ಆಚರಿಸುವ ಯಜ್ಞ ಯಾಗಾದಿಗಳನ್ನೂ ಹಿಂಸಾತ್ಮ ವಾದ ಪಶುವಧೆಯನ್ನೂ ನಿಲ್ಲಿಸಬೇಕು. ಜನತೆಯು ಅರ್ಥವಿಲ್ಲದ ಸಂಪ್ರದಾಯ ಗಳನ್ನು, ಆಚಾರಗಳನ್ನು ತ್ಯಜಿಸಬೇಕು. ಬಸವಣ್ಣನವರು ಇಂಥ ಕ್ರಾಂತಿದಾಯ ಸಮಾಜೋದ್ಧಾರ ಮಾರ್ಗವನ್ನು ಎತ್ತಿಹಿಡಿದಿದ್ದರಿಂದ ಜನಪ್ರಿಯತೆಯನ್ನು ಗಳಿಸಿ ದ್ದರಲ್ಲಿ ಆಶ್ಚರ್ಯವೇನಿಲ್ಲ.

ಸಮಾಜದ ಅವನತಿಗೆ ಕಾರಣವಾಗಿದ್ದ ಜಾತಿವಾದ ಮತ್ತು ಅಸ್ಪೃಶ್ಯತೆಯ ಕಳಂಕವನ್ನು ಬಸವಣ್ಣನವರು ಹೋಗಲಾಡಿಸಿ ಸರ್ವಸಮಾನತೆಯ ಬುನಾದಿಯ ಮೇಲೆ ಸಮಾಜನ್ನು ಸುಧಾರಿಸಿದರು. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಭಕ್ತರಾದವರನ್ನೆಲ್ಲ ಒಂದೇ ಎಂಬೆ" ಎಂಬ ಸಮತಾವಾದದ ತತ್ವವನ್ನು ಸಾರಿದರು. ಕಲ್ಯಾಣದಲ್ಲಿ ಇತಿಹಾಸ ಪ್ರಸಿದ್ಧವಾದ 'ಅನುಭವ ಮಂಟಪ'ವೆಂಬ ವಿದ್ಯಾಪೀಠವನ್ನು ಸ್ಥಾಪಿಸಿ ವೇದೋಪನಿಷತ್ತುಗಳ ರಹಸ್ಯಗಳನ್ನೂ ಧರ್ಮಬೋಧನೆಗಳನ್ನು ತಿಳಿಗನ್ನಡ ದಲ್ಲಿ ಜನ ಸಾಮಾನ್ಯರಿಗೂ ಅರ್ಥವಾಗುವಂತೆ ಉಪದೇಶಿಸಿದರು. ಕಾಯಕವೆ ಕೈಲಾಸ ಎಂಬ ಬೀಜಮಂತ್ರವನ್ನು ಉಪದೇಶಿಸಿ ಎಲ್ಲ ಕಾಯಕಗಳಿಗೂ ಸಮಾನವಾದ ಸ್ಥಾನ ವನ್ನು ಕಲ್ಪಿಸಿಕೊಟ್ಟರು. ಸ್ವಾವಲಂಬನೆ, ಸ್ವತಂತ್ರ ಮನೋಭಾವಗಳನ್ನು ಬೆಳೆಸು ವುದಕ್ಕೆ ಪ್ರೇರಕರಾದರು. ಸಮಾಜದಲ್ಲಿ ಸ್ತ್ರೀಯರಿಗಿದ್ದ ಅಡಚಣೆಗಳನ್ನು ತೊಡೆದು ಹಾಕಿ ಸಮಾಜದ ಅರ್ಧ ಅಂಗವಾದ ಮಹಿಳಾವರ್ಗಕ್ಕೂ ಸಮಾನಸ್ಥಾನವನ್ನು ಕೊಟ್ಟು ಗೌರವಿಸಿದರು. ನಿತ್ಯ ಜೀವನದಲ್ಲಿ ಸತ್ಯಶೀಲತೆಯ ಮಹತ್ವವನ್ನು ಒತ್ತಿ ಹೇಳಿ, ನುಡಿದಂತೆ ನಡೆದು ಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿದರು. 'ಸಕಲ ಜೀವಾತ್ಮರಿಗೆ ಲೇಸ ಬಯಸುವವರೆಲ್ಲ ಕುಲಜರು" ಎಂಬ ಮಹೋನ್ನತ ಲೋಕ ನೀತಿ ಯನ್ನು ಘೋಷಿಸಿ ವಿಶ್ವ ಬಂಧುತ್ವಕ್ಕೆ ಮಾರ್ಗತೋರಿದರು.

ಸುಮಾರು ಎಂಟುನೂರು ವರ್ಷಗಳ ಹಿಂದೆ ಬಸವಣ್ಣನವರು ಹಮ್ಮಿಕೊಂಡಿದ್ದ ಮಹೋದ್ದೇಶ ಅವರ ಜೀವಿತ ಕಾಲದಲ್ಲಿ ಪೂರ್ಣ ಫಲಕಾರಿಯಾಗಲಿಲ್ಲ. ಆದರೆ

ಅವರು ಅಂದು ನೆಟ್ಟ ಸಸಿ ಹೆಮ್ಮರವಾಗಿ ಬೆಳೆದು ನಿರೀಕ್ಷೆಗಿಂತಲೂ ಅಧಿಕವಾದ ಫಲವನ್ನು ಈಗ ಕೊಡುತ್ತಿದೆ. ಅವರು ಸಾರಿದ ಸಂದೇಶ ಇಂದಿಗೂ ಜೀವಂತವಾಗಿ ಚಿರನೂತನವಾಗಿ ಪ್ರಜ್ವಲಿಸುತ್ತಿದೆ. ಸ್ವಪರಿಪೂರ್ಣ ಆದರ್ಶ ಸಮಾಜವನ್ನು ರಚಿಸಿದ ಬಸವಣ್ಣನವರು ಇಂದಿನ ಸಮಾಜ ಸುಧಾರಕರಿಗೂ ರಾಷ್ಟ್ರ ನಿರ್ಮಾಪಕರಿಗೂ ಆರಾಧ್ಯಮೂರ್ತಿಗಳಾಗಿದ್ದಾರೆ. ಬಸವಣ್ಣನವರು ಧರ್ಮಪ್ರಚಾರಕರಾಗಿ, ತತ್ವಶೋಧಕರಾಗಿ, ಸಮಾಜಿಕ, ಧಾರ್ಮಿಕ, ಮತ್ತು ಆರ್ಥಿಕ ಸಾಧನೆಗಳಿಂದ ಬಸವಣ್ಣನವರು ಯುಗಪುರುಷರಾಗಿ ಕನ್ನಡ ನಾಡಿಗೇ ಅಲ್ಲದೆ ಇಡೀ ಭರತಖಂಡಕ್ಕೇ ಜೀವಜ್ಯೋತಿಯಾಗಿ ಬೆಳಗಿದ್ದಾರೆ.

ಬಸವಣ್ಣನವರಾದ ಮೇಲೆ ಭರತಖಂಡದಲ್ಲಿ ಜನ್ಮ ತಾಳಿದ ಮಾನವ ಉದ್ಧಾರಕರಲ್ಲಿ ಮಹಾತ್ಮ ಗಾಂಧಿ ಅವರು ಮುಖ್ಯರು. ಅವರು ಇಪ್ಪತ್ತನೆಯ ಶತಮಾನದ ಯುಗ ಪುರುಷರು. ಇಡೀ ಜಗತ್ತಿಗೇ ಅವರು ಆದರ್ಶ ಪ್ರಾಯರಾಗಿ ಒಂದು ಹೊಸ ಯುಗವನ್ನೇ ಪ್ರಾರಂಭಿಸಿದರು. ಸತ್ಯ ಅಹಿಂಸೆಗಳೇ ಗಾಂಧೀಜಿಯ ಮಹಾಸ್ತ್ರಗಳು ಈ ಶಾಂತಿಯ ಅಸ್ತ್ರಗಳಿಂದಲೇ ಸತ್ಯಾಗ್ರಹಿಗಳ ಸೈನ್ಯವನ್ನು ಸೇರಿಸಿ ಯೋಧರಂತೆ ಹೋರಾಡಿ ಜಗತ್ಕಲ್ಯಾಣದ ಮಾರ್ಗವನ್ನು ತೋರಿಸಿದರು. ವ್ಯಕ್ತಿ, ದೇಶ, ರಾಷ್ಟ್ರಗಳ ಕಲ್ಪನೆಯನ್ನೂ ಮೀರಿ ಮಾನವಕೋಟಿಯ ಸುಖಶಾಂತಿಗಳಿಗಾಗಿ ಶ್ರಮಿಸಿದರು.

ಮಾನವತ್ವವನ್ನು ಮರೆತು ಪಶುಗಳಂತೆ ವರ್ತಿಸುತ್ತಿದ್ದ ಇಂದಿನ ಬಲಿಷ್ಠರ ಹೃದಯವನ್ನು ಗಾಂಧೀಜಿ ಸತ್ಯ ಪ್ರೇಮ ದಯೆಗಳಿಂದ ಪರಿವರ್ತಿಸಿ ದೇವತ್ವವನ್ನು ತೋರಿಸಿ ಕೊಟ್ಟ ವ್ಯಕ್ತಿ. ಸತ್ಯ ಮೇವ ಜಯತೇ, ಅಹಿಂಸಾ ಪರಮೋಧರ್ಮಃ ಎಂಬ ಸೂತ್ರಗಳನ್ನು ಹಿಡಿದು ಜಗತ್ತಿಗೇ ಮಾರ್ಗದರ್ಶಕರಾದರು. ಗಾಂಧೀಜಿಯಂತೆ ತಮ್ಮ ಜೀವಿತ ಕಾಲದಲ್ಲೇ ವಿಶೇಷವಾದ ಪ್ರಖ್ಯಾತಿಯನ್ನು ಪಡೆದ ವ್ಯಕ್ತಿಯನ್ನು ಚರಿತ್ರೆಯಲ್ಲಿ ಸಂದರ್ಶಿಸುವುದು ತೀರ ಅಪರೂಪ.

ಸುಮಾರು ಎರಡು ಶತಮಾನಗಳು ಪರದಾಸ್ಯದಲ್ಲಿ ಕೊಳಲುತ್ತಿದ್ದ ನಮ್ಮ ಭರತಖಂಡವನ್ನು ಸ್ವತಂತ್ರಗೊಳಿಸುವುದಕ್ಕಾಗಿ ಸತ್ಯ ಮತ್ತು ಅಹಿಂಸೆಗಳೆಂಬ ದಿವ್ಯಾಸ್ತ್ರಗಳಿಂದ ಒಂದು ಪ್ರಬಲ ಸಾಮ್ರಾಜ್ಯದ ವಿರುದ್ಧವಾಗಿ ಹೋರಾಡಿ ಜಯ ಗಳಿಸಿದರು. ಈ ರೀತಿಯ, ರಕ್ತಪಾತವಿಲ್ಲದ ಕ್ರಾಂತಿ ಹಿಂದೆ ಎಂದೂ ಎಲ್ಲಿಯೂ ನಡೆದಂತೆ ಚರಿತ್ರೆಯಿಂದ ಕಂಡುಬರುತ್ತದಿಲ್ಲ.

ಗಾಂಧೀಜಿಯವರ ಕಾರ್ಯ ಕ್ಷೇತ್ರ ಬಹುಮುಖವಾದುದು. ಮಾನವ ಉದ್ಧಾರಕ್ಕಾಗಿ ಅವರು ಕೈಗೊಂಡ ಮಾರ್ಗಗಳು ಜಗತ್ತಿಗೇ ಮೇಲ್ಪಂಕ್ತಿಯಾಗಿವೆ. ನಮ್ಮ ಜನರಲ್ಲಿನ ಅಜ್ಞಾನ ಅಂಧಕಾರ ಮೌಢ್ಯಗಳನ್ನು ತೊಲಗಿಸಿ ಇತರ ಜನಾಂಗಗಳೊಂದಿಗೆ

ತಲೆಯೆತ್ತಿ ಬಾಳುವಂತೆ ಮಾಡಲು ತಮ್ಮ ಜೀವನವನ್ನೇ ಮುಡುಪಾಗಿರಿಸಿದರು. ಅವರು ಭಗವದ್ಭಕ್ತರಲ್ಲಿ ಅಗ್ರಗಣ್ಯರಾಗಿ, ಶ್ರೇಷ್ಠ ಧಾರ್ಮಿಕ ಜೀವನವನ್ನು ನಡೆಸಿ ನಿಷ್ಠಾವಂತ ದೇಶಸೇವಕರೂ ಜಗತ್ತಿನ ಶಾಂತಿದೂತರೂ ಆಗಿ ವಿಶ್ವಶಾಂತಿಗಾಗಿ ಜಗತ್ಕಲ್ಯಾಣಕ್ಕಾಗಿ ಹೋರಾಡಿ ಅಮರರಾದವರು.

ವಿಶ್ವದ ಚರಿತ್ರೆಯನ್ನು ಅವಲೋಕಿಸಿದಾಗ ಮಾನವ ಕಲ್ಯಾಣಕ್ಕಾಗಿ, ದೀನ ದಲಿತರ ಉದ್ಧಾರಕ್ಕಾಗಿ ಹೋರಾಡಿದವರು ಹಲವಾರು ಜನ ಕಂಡುಬರುತ್ತಾರೆ. ಅವರಲ್ಲಿ ಗೌತಮ ಬುದ್ಧ, ಜಗಜ್ಜ್ಯೋತಿ ಬಸವೇಶ್ವರ ಮತ್ತು ಮಹಾತ್ಮಗಾಂಧಿ ಇವರು ಅಗ್ರೇಸರರು. ಕಾಲದೃಷ್ಟಿಯಿಂದ ಇವರು ಬೇರೆಯಾದರೂ ಅಭಿಪ್ರಾಯದ ದೃಷ್ಟಿಯಿಂದ ಒಂದೇ ಆಗಿದ್ದಾರೆ ಇವರು ನಿರಂತರ ಮಾನವ ಹಿತಸಾಧಕರಾಗಿದ್ದಾರೆ. ಸಾಮ್ರಾಟನಾಗಿದ್ದ ಬುದ್ಧ ಸಂಸಾರದ ಬವಣೆಯಲ್ಲಿ ತೊಳಲುತ್ತಿದ್ದ ಮಾನವರಿಗೆ ಆತ್ಮ ಕಲ್ಯಾಣದ ಮಾರ್ಗವನ್ನು ತೋರಿದನು. ಅವನು ಸಾರಿದ ಧರ್ಮನೀತಿಗಳು ದೇಶ ವಿದೇಶಗಳಲ್ಲೂ ಹರಡಿಕೊಂಡವು. ಬಸವಣ್ಣನವರು ಜೀವನದ ಹಲವಾರು ಕ್ಷೇತ್ರ ಗಳಲ್ಲಿ ಕ್ರಾಂತಿಯನ್ನು ಮಾಡಬೇಕಾಯಿತು. ಸ್ವಯಂ ಭಕ್ತಿ ಭಾಂಡಾರಿಗಳಾದ ಬಸವಣ್ಣನವರು ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಹಿತ್ಯ ಕ್ಷೇತ್ರಗಳಲ್ಲಿ ಕ್ರಾಂತಿಯನ್ನು ಮಾಡಿ ಜನ ಸಾಮಾನ್ಯರಿಗೆ ಮುಕ್ತಿಮಾರ್ಗವನ್ನು ತೋರಿದ್ದಾರೆ. ಮಾನವರ ಹಿತಸಾಧನೆಗೆ ಗಾಂಧೀಜಿಯವರು ಕೈಕೊಂಡ ಮಾರ್ಗ ಇವರಿಬ್ಬರಿಗಿಂತ ಭಿನ್ನವಾದದು. ಗಾಂಧೀಜಿಯವರು ಈ ದೇಶಕ್ಕೆ ಸ್ವರಾಜ್ಯವನ್ನು ಒದಗಿಸಿಕೊಡುವು ದಕ್ಕೆ ಜೀವಮಾನ ಪೂರ್ತಿ ಹೆಣಗಬೇಕಾಯಿತು. ಸ್ವಾತಂತ್ರ್ಯದ ಮಹತ್ವವನ್ನು ನಮ್ಮ ಜನತೆಗೆ ಮನದಟ್ಟು ಮಾಡಿಕೊಡುವುದರಲ್ಲಿಯೇ ಅವರ ಜೀವನ ಕೊನೆಗೊಂಡು ಗಾಂಧೀಜಿಯವರು ತಮ್ಮ ಗುರಿಯನ್ನು ಸಾಧಿಸಿದರು.

ಬುದ್ಧ, ಬಸವ, ಗಾಂಧೀಜಿ ಅವರು ಮಾನವಕಲ್ಯಾಣಕ್ಕಾಗಿ ಜನ್ಮವೆತ್ತಿದ ಮಹಾನುಭಾವರು. ಈ ದೇಶ, ಈ ದೇಶದ ಜನರ ಬಾಳು ಹಸನಾಗಲು ಜೀವ ಮಾನವೆಲ್ಲ ಅಹರ್ನಿಶಿ ದುಡಿದ ವಿಭೂತಿ ಪುರುಷರು ಜಗತ್ತಿನ ಕಲ್ಯಾಣಕ್ಕಾಗಿ ಜನ್ಮತಾಳಿದ ತ್ರಿಮೂರ್ತಿಗಳು ಇವರು ನಡೆದ ದಾರಿಯಲ್ಲೇ ನಡೆದು, ಇವರು ಹಾಕಿ ಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಿದರೆ ಈ ನಾಡಿನ ಜನತೆಯ ಬದುಕು ಬಂಗಾರ ವಾಗುವುದರಲ್ಲಿ ಸಂಶಯವಿಲ್ಲ ಆ ಕಾಲ ಸನ್ನಿಹಿತವಾಗಲಿ ಎಂದು ಹಾರೈಸೋಣ. ●

---

ಮಹಾದೇವಿಯಕ್ಕನ ವಚನಗಳು.

ಅರಿವೆನೆಂದರೆ ಅರಿಯಬಾರದು ನೋಡಾ! ಘನಕ್ಕೆ ಘನತಾನೆ ನೋಡಾ!

ಚನ್ನಮಲ್ಲಿಕಾರ್ಜುನನ ನಿರ್ಣಯವಿಲ್ಲದೆ ಪೋದೆನು.

# ಕಾಯಕವೇ ಕೈಲಾಸ

—ಸಿ. ಬಿ. ಪಾಟೀಲ, ಬಿ. ಎ., ಬಿಎಡ್.
ಉಪಾಧ್ಯಾಯರು, ಮಹದೇಶ್ವರ ಪ್ರೌಢಶಾಲೆ, ಮಹದೇಶ್ವರ ಬೆಟ್ಟ ಕೊಳ್ಳೇಗಾಲ ತಾ॥ ಮೈಸೂರು

ಮಾನವನ ಇತಿಹಾಸದಲ್ಲಿಯೇ ಮೊದಲು ಕಾಯಕ ಮತ್ತು ಕಾರ್ಯಗಳ ಸಂಬಂಧವನ್ನು ತೋರಿಸಿಕೊಟ್ಟವರು ಶರಣವರೇಣ್ಯರು. ಕಾಯಕವಿಲ್ಲದೆ ಕಾಯ ಇಲ್ಲ ಎಂಬ ಮಾತಿನಿಂದ ಕಾಯಕ ನಿಷ್ಠೆಯನ್ನು ಪ್ರಪಂಚಕ್ಕೆ ತೋರಿಸಿಕೊಟ್ಟವರಲ್ಲಿ ಭಗವಾನ ಬಸವಣ್ಣ, ನುಲಿಯ ಚಂದಯ್ಯ, ಆಯ್ದಕ್ಕಿ ಮಾರಯ್ಯ ಮೋಳಿಗೆಯ ಮಾರಯ್ಯ, ಡೋಹರ ಕಕ್ಕಯ್ಯ, ದಾಸೋಹ ಸಂಗಣ್ಣ. ಇವರೇ ಮೊದಲಾದ ಮುಖ್ಯ ಶರಣರು.

ಧರ್ಮದ ತೆರೆಮರೆಯಲ್ಲಿ ಸಮಾಜದ ಶೋಷಣೆಯಾಗುವುದನ್ನು ಮತ್ತು ಸಮಾಜ ಬಡತನವಾಗುವುದನ್ನು ತಪ್ಪಿಸಿ ಅದಕ್ಕೆ ಕಾಯಕದ ಅಂದರೆ ಹೊಟ್ಟೆಪಾಡಿನ ಉದ್ಯೋಗಕಾಯಕ ಅದನ್ನು ಬಿಡಬಾರದು ಅದರಿಂದ ಮುಂದೆ ಸದ್ಗತಿಯನ್ನು ಹೊಂದ ಬಹುದು. ಈ ಕಾಯಕದಿಂದ ಇಹ ಪರಗಳಲ್ಲಿ ನೆರನಿಲ್ಲಬಹುದು ಎಂದು ಹೇಳಿ ಸಮಾಜವನ್ನು ಶಕ್ತಿಯುತವನ್ನಾಗಿ ಮಾಡಿದರು.

ಶರಣರ ಜೀವನದಲ್ಲಿ ನಡೆದ ಕೆಲವು ಘಟನೆಗಳನ್ನು ನೋಡಬಹುದು ಒಂದು ದಿನ ನುಲಿಯ ಚಂದಯ್ಯನೆಂಬ ಶರಣ ಹಗ್ಗಕ್ಕೆ ಬೇಕಾದ ಹುಲ್ಲನ್ನು ಕೆರೆಯ ದಡದಲ್ಲಿ ಕೊಯ್ಯುತ್ತಿದ್ದಾಗ ಈತನನ್ನು ಪರೀಕ್ಷಿಸಲು ಇಷ್ಟಲಿಂಗವು ನೀರಿನಲ್ಲಿ ಬಿದ್ದಿತು.

ಆದರೆ ಚಂದಯ್ಯ ಅದರ ಕಡೆಗೆ ನೋಡದೆ ತನ್ನ ಕೆಲಸ [ಕಾಯಕ]ದಲ್ಲಿ ಮಗ್ನನಾದ ಹೊರೆಯನ್ನು ಹೊತ್ತುಕೊಂಡು ಬರುವಾಗ್ಗೆ ಅಂಗದಿಂದ ಬೇರೆಯಾದ ಲಿಂಗವು ಚಂದಯ್ಯನನ್ನು ಹಿಂಬಾಲಿಸುತ್ತ ಬಂದು ನನ್ನನ್ನು ನಿನ್ನ ಸಂಗಡ ಕರೆದುಕೊಂಡು ಹೋಗು ಎನ್ನುತ್ತದೆ. ಕೇಳಿಯೂ ಕೇಳದಂತೆ ನಡೆದು ಮನೆಯನ್ನು ಸೇರುತ್ತಾನೆ. "ಅರಿವನರಿದೆನೆಂದು ಕ್ರಿಯೆಯ ಬಿಡಬಹುದೇ'' ಎಂಬ ಆತನ ಮಾತಿನಲ್ಲಿ ಕಾಯಕದ ಮಹತ್ವವನ್ನು ನಾವು ನೋಡಬಹು. ಕೊನೆಗೆ ಚಂದಯ್ಯ ಹಗ್ಗ ಮಾಡಿ ಕೊಟ್ಟು ಮಾರಿಕೊಂಡು ಬರಲು ಲಿಂಗಕ್ಕೆ ಹೇಳುತ್ತಾನೆ. ಸಹಸ್ರ ಹೊನ್ನು ಕೊಟ್ಟು ಅದನ್ನು ಕೊಳ್ಳಲು ಲಿಂಗವು ಚಂದಯ್ಯನಿಗೆ ಕೊಡಲು ಹೋದಾಗ "ನೇಮದ ಕೂಲಿಯನ್ನು ಬಿಟ್ಟು ಹೇಮದ ಆಸೆಗೆ ಮನಸೋಲು ಬಾರದು''

'ಕಾರೆಯು ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕೆ ಅರ್ಪಿತವಲ್ಲದೆ, ದುರಾ
ಯಿಂದ ಬಂದುದು ಅನರ್ಪಿತ' ಎಂಬ ಮಾತುಗಳಿಂದ ತನ್ನ ಕಾಯಕದ ಮಹತ್ವವನ
ಲಿಂಗಕ್ಕೆ ತಿಳಿಸುವನು.

ಕಾಯಕ ನಿಷ್ಠೆಯಲ್ಲಿ ಹಿಚ್ಚಿನ ಮಹತ್ವವನ್ನು ಕೊಟ್ಟವರು ಆಯಕ್ಕಿ ಮಾರಯ್ಯ
ನೆಂಬ ಶಿವಶರಣ ಈತನ ಕಾಯಕ ಅಕ್ಕಿ ಕಾಳನ್ನು ಆಯ್ದು ತಂದು ಅಂದಿನ ಜೀವ
ವನ್ನು ಕಳೆಯುವಾತ ಆತನ ಹೆಸರು ಕಾಯಕದಿಂದ ಬಂದುದು ಕಾಯಕದಲ್ಲಿ
ನಿರುತವಾದರೆ ಗುರುದರ್ಶನವಾದರೂ ಮರೆಯಬೇಕು. ಲಿಂಗ ಪೂಜೆಯಾದರೂ
ಮರೆಯಬೇಕು. ಜಂಗಮ ಮುಂದಿದ್ದರೂ ಹಂಗು ಅರಿಯಬೇಕು. ಕಾಯಕವೆ
ಕೈಲಾಸವಾದ ಕಾರಣ. ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು'
ಎಂಬ ಮಾತುಗಳು ಕಾಯಕ ಮಹತ್ವವನ್ನು ತಿಳಿಸುತ್ತದೆ. ಒಂದು ದಿನ ಮಾರಯ್ಯ
ಹೆಚ್ಚಿಗೆ ಅಕ್ಕಿ ಕಾಳನ್ನು ಆಯ್ದು ತರುತ್ತಾನೆ ಅದನ್ನು ನೋಡಿದ ಹೆಂಡತಿ ಲಕ್ಷಮ್ಮ
ತನ್ನ ಗಂಡನನ್ನು ಈ ರೀತಿ ಎಚ್ಚರಿಸುತ್ತಾಳೆ. ಮತ್ತು ಆಸೆಯ ಬೇರನ್ನು ಕತ್ತರಿಸು
ತ್ತಾಳೆ. "ಆಸೆಯೆಂಬುದು ಅರುಸಿಂಗಲ್ಲದೆ ಶಿವಭಕ್ತರಿಗಂಟೆ ಅಯ್ಯ ?

ರೋಷವೆಂಬುದು ಯಮಧೂತರಿಗಲ್ಲದೆ ಅಳಾತರಿಗುಂಟೋ ಅಯ್ಯ ?
ಈ ಸಕ್ಕಿಯಾಸೆ ನಿಮಗೇಕೆ ? ಈಶ್ವರನೊಪ್ಪ.

ಮಾರಯ್ಯ ಪ್ರೀತಿಯ ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯ ಕಾಯಕದ
ಹೆಸರಿನಿಂದ ಸಂಪತ್ತನ್ನು ಗಳಿಸುವುದು ಸರಿಯಲ್ಲ, ಆಶಾಬಂಧಿತ ಅರಸನಾದರೆ ಆಶಾ
ತೀತ ಭಕ್ತನಾಗುತ್ತಾನೆ. ಆಶಾ ಪಿಶಾಚಿಯಿಂದ ಹಿಡಿಯಲ್ಪಟ್ಟವನು ಅರಸ, ಪಿಶಾಚಿ
ಯನ್ನು ಮೆಟ್ಟಿನಿಂತವನು ಭಕ್ತ. ಕಾಯಕ ಮಾಡಿದರೂ ದುರಾಸೆಯಿಂದ ಆಗಿರ
ಬಾರದು. ನೀವು ತಂದಿರುವ ಹೆಚ್ಚಿನ ಅಕ್ಕಿಯನ್ನು ಅಲ್ಲಿಗೆ ಹೋಗಿ ಸುರಿದು ಬನ್ನಿರಿ
ಎಂದು ಹೇಳಿ ತನ್ನ ಪತಿ ಮಾರಯನನ್ನು ಎಚ್ಚರಿಸಿ ಕಳುಹಿಸುತ್ತಾಳೆ. ಮಹಾಸತಿ
ಲಕ್ಕಮ್ಮ ಮಹಾತ್ಮ್ಯಯವನ್ನು ಸಾಧಿಸಲಿಕ್ಕೆ ಜೀವಬೇಕು ಜೀವಕ್ಕೆ ಅನ್ನಬೇಕು ಅಷ್ಟೆ
ಹೆಚ್ಚಿಗೆ ಸಂಪಾದನೆ ಸರಿಯಲ್ಲ ಬೇರೆಯವರ ಅನ್ನವನ್ನು ಕಿತ್ತು ಕೊಂಡಂತೆಯೇ ಎಂಬ
ಅರ್ಥ ಬರುವಂತೆ ಕಾಯಕದ ಮಹತ್ವವನ್ನು ಮೆರೆದಿದ್ದಾರೆ.

ಹೀಗೆಯೇ ಮತ್ತೊಬ್ಬ ಶರಣನೆಂದರೆ ಮೋಳಿಗೆಯ ಮಾರಯ್ಯ ಮೊದಲು
ಕಾಶ್ಮೀರದ ರಾಜನಾದರೂ ಬಸವಣ್ಣನವರ ಕಾಯಕದ ಮಹತ್ವವನ್ನು ತಿಳಿದು ಕಲ್ಯಾಣ
ಬಂದವರು ಕಟ್ಟಿಗೆಯನ್ನು ಕಾಡಿನಿಂದ ತಂದು ಮಾರುವ ಕಲಸವೇ ಈ ಶರಣನ
ಕಾಯಕವಾಗಿದೆ. ಮೋಳಿಗೆ ಅಂದರೆ ಕಟ್ಟಿಗೆ ಎಂದರ್ಥ. ಆದರಿಂದ ಈ ಶರಣನ
ಹೆಸರು. ಮೋಳಿಗೆಯ ಮಾರಯ್ಯನೆಂದು ಪ್ರಸಿದ್ಧಿಯನ್ನು ಪಡೆಯಿತು.

ವ್ಯಕ್ತಿಯೊಬ್ಬ ಒಂದು ಕೆಲಸದಲ್ಲಿರಬೇಕು ಎಂದು ಸರ್ಕಾರ ಮತ್ತು ಸಮಾಜ
ಏನನ್ನು ಸಾರುತ್ತದೆಯೋ ? ಅದನ್ನು ಶರಣರು ಬಹಳ ಹಿಂದೆಯೇ ಅರ್ಥಮಾಡಿ
ಕೊಂಡು ಮಾನವ ಕೋಟಿಗೆ ಸಾರಿದ್ದಾರೆ. ಮಹಾತ್ಮಾಗಾಂಧೀಜಿಯವರು ಹೇಳುವ
ಎಲ್ಲಾ ಹಳ್ಳಿಯ ಜನ ಸ್ವಾವಲಂಬಿಗಳಾಗಬೇಕು ಆದರಿಂದ ಆರ್ಥಿಕವಾಗಿ, ಸಮಾ
ಜಿಕವಾಗಿ ನೈತಿಕವಾಗಿ, ಸ್ವಾತಂತ್ರವನ್ನು ಗಳಿಸಿ ಕೊಂಡಂತ್ತಾಗುತ್ತದೆ. ಎಂದು
ಹೇಳುವುದನ್ನು ಅಣ್ಣ ಬಸವಣ್ಣ ಮೊದಲೇ ತಿಳಿಸಿದ್ದಾರೆ.

ಆದ್ದರಿಂದ ಶರಣರ 'ಕಾಯಕ ತತ್ವ" ವಿಚಾರ ಪೂರ್ಣವಾದ ತತ್ವವಾಗಿದೆ.
ಯಾರೇ ಆಗಲಿ ಕಾಯಕ ನಿರತವಾರಬೇಕು ಕಾಯಕದಲ್ಲಿ ನಿರತನಾದವನು ಗುರು
ಲಿಂಗ ಜಂಗಮವನ್ನಾದರೂ ಮರೆಯಬೇಕು ಎನ್ನುವುದರಲ್ಲಿ ಕಾಯಕದಿಂದ ಮುಕ್ತಿಯ
ಅರ್ಥಕೊಡುತ್ತದೆ. ಅರ್ಥವೇ ಕಾಯಕವೇ ಕೈಲಾಸ ಎಂಬ ಪದ Work is
worship. Work lifts us to heaven ಎಂಬ ಇಂಗ್ಲಿಷ್ ಭಾಷೆಯ ಗಾದೆ
ಗಳಿಗೆ ಮಿಗಿಲಾಗಿ ತೋರಿದೆ.

# ಬಸವ ಪ್ರತಿಜ್ಞಾ

—ಟಿ. ಎನ್. ಮಹದೇವಯ್ಯ

ಕಳೆದು ಹೋದರೆ ಕನ್ನದುಳಿಯ ಹಿಡಿವೆ. ಬಂದಿವಿಡಿದರೆ ನಿಮ್ಮಿಂದ ಮುಂದೆ ನಡೆವೆ. ಮನಭೀತಿ ಮನಶಂಕೆಗೊಂಡೆನಾದರೆ ನಿಮ್ಮಾಣೆ, ನಿಮ್ಮ ಪುರಾತನರಾಣೆ ಆಳ್ದರನ ಸದಾಚಾರವೆನ್ನದಿದ್ದರೆ ಕಟ್ಟಳು ಶಿಷ್ಯತನಕ್ಕೆ, ಹೋದ ಬಸವ ನೋಡಾ ಕೂಡಲ ಸಂಗಮ ದೇವಾ.

ಸಾಧನಾವಸ್ಥೆಯಲ್ಲಿ ಸಾಧಕನು ಯಾರು ಸಾಧದೆಯಲ್ಲಿ ಜಯಶಾಲಿಗಳಾಗಿ ಬೆಳಕಿಗೆ ಬಂದಿರುತ್ತಾರೋ ಅವರ ನುಡಿಗಳಂತೆ ತನ್ನ ಜೀವನವನ್ನು ತಿದ್ದಿಕೊಂಡು ಮುಂದೆ ಹೊರಟರೆ ಮಾತ್ರ ಆತನಿಗೆ ಆತ್ಮ ಸಾಕ್ಷಾತ್ಕಾರವಾಗುವುದು ಅಂಥಹರನ್ನೇ ಸಾಧಕನು ತನ್ನ ಗುರುಗಳೆಂದು ತಿಳಿದು ಅವರು ಹೇಳಿದಂತೆ ಆಚರಿಸಬೇಕು. ಹಾಗೆ ಮಾಡಿದರೆ ಅವನ ಹಾದಿಯು ಪ್ರಶಸ್ತವಾಗಿರುವುದು. ಅವರ ನುಡಿಯಂತೆ ನಡೆದು ಅವರೊಡನೆ ಕೂಡಿ ಬೆಳೆದರೆ ಸಾಧಕನನಡೆನುಡಿಗಳೆಲ್ಲ ಪರಿಪಕ್ವವಾಗುವುವು ಜಾರ್ಜ್‌ಬರ್ಹರ್ಟ್ ಎಂಬುವನು ಹೇಳುವಂತೆ ಸಜ್ಜನಹವಾಸದಲ್ಲಿರು ಅಂದರೆ ನೀನೂ ಅವರೊಳಗಾಗುವೆ ಆದುದರಿಂದ ಮನುಷ್ಯನ ಜೀವನವನ್ನು ಬದಲಾಯಿಸುವುದು. ಅವನನ್ನು ಪರಿಶುದ್ಧಗೊಳಿಸಿ ಉನ್ನತಿಯ ಶಿಖರಕ್ಕೇರಿಸುವುದು. ಹಾಳು ಮಾಡಿ ನರಕಕ್ಕೆಸುವುದೂ ಅವನ ಸಂಗಡಿಗರ ಕೈಯಲ್ಲಿ ಇರುತ್ತದೆ ಸಹವಾಸವೇ ಜೀವನ ಬೆಳವಣಿಗೆಗೆ ಮುಖ್ಯವಾದುದು. ಆದುದರಿಂದ ಉನ್ನತಿಯನ್ನು ಹೊಂದಲಿಚ್ಛಿಸುವವರೆಲ್ಲರೂ ಶ್ರೇಷ್ಠತರಗತಿಯಲ್ಲಿ ನಡೆಯುವರು.

ಯಾವಾತನು ಸಾಕ್ಷಾತ್ಕಾರದ ಆನಂದವನ್ನನುಭವಿಸಿರುವನೋ ಅವನು ಮಾತ್ರ ಅದನ್ನು ಜನರಿಗೆ ಬೋಧಿಸಲು ಹಕ್ಕುಳ್ಳವನಾಗಿದ್ದಾನೆ. ಅದಕ್ಕಾಗಿಯೇ ಭಗವಾನ್ ರಾಮಕೃಷ್ಣಪರಮಹಂಸರು ಈ ರೀತಿ ಹೇಳಿರುವರು. ದೇವರನ್ನು ಕಂಡವರಿಗೇ ಮಿಕ್ಕವರಿಗೆ ಬೋಧಿಸುವ ಹಕ್ಕು ಇದೆ. ಮಿಕ್ಕವರಿಗೆಲ್ಲ ಹೃದಯದ ಮಲವನ್ನು ತೊಳೆಯಲರಿಯದೆ ತಾವು ಉಬ್ಬಿಯುದೊಳಿದ್ದು ಮಿಂದು ಗದಗುಟ್ಟುವಂತೆ, ಆದರಿಂದೇನು ಫಲ. ಶಿವಶರಣರೆಲ್ಲರು ಅದೇ ರೀತಿ ದೇವರನ್ನು ತಿಳಿದವರು. ಲಿಂಗಾಂಗ ಸಾಮರಸ್ಯದ ನಿಜಾನಂದದಲ್ಲಿ ನಿತ್ಯವೂ ಓಲಾಡುತ್ತಿದ್ದವರು ಅಂಥ ಹರೇ ಜೀವನನ್ನು ದೇವನ ಅವಸ್ಥೆಗೆ ತಂದಿಡಲು ಸಾಧ್ಯಶಕ್ತಿಯುಳ್ಳವರು. ಶಾಧಕರು ಅದೇ ಅವಸ್ಥೆಯ ಸಿದ್ಧರನ್ನೇ ಹುಡುಕಿ ಅವರ ಸಂಗದಿಂದ ಆನಂದವನ್ನು ಅನುಭವಿಸುವರು. ನಿಜಾನಂದವನ್ನು ಸವಿದ ಯೋಗಿಗಳಿಗೆ ಆವುದು ಬೇಕು ? ಕಳ್ಳತನದ ಕೆಲಸ ಬೇಕಾ

? ಪರದ್ರವ್ಯ ಪರರ ಸಕಲ ವೈಭವಗಳೂ ಅವರಿಗೆ ಕಸದ ಕಡ್ಡಿಯಂತೆ ತುಚ್ಛ.
ದ ಸಾಮ್ರಾಟಗಿರಿಯೂ ಅವರಿಗೆ ಬೇಕಿಲ್ಲ. ಏಕೆಂದರೆ ಆತ್ಮಜ್ಞಾನಿಗಳಾದವರು
ದ ಪ್ರತ್ಯಕ್ಷ ಸಾಮ್ರಾಟರೇ ಆಗಿರುತ್ತಾರೆ. ನಿಜಾನಂದದ ಆನಂದವು ಅವರಿಗೆ
ತೀವ್ರವಾದ ಶಕ್ತಿಯನ್ನು ಕೊಡುತ್ತದೆ. ಶ್ರೇಷ್ಠತೆಗಳನ್ನು ತಂದುಕೊಡುತ್ತದೆ.

ಬಸವೇಶ್ವರನು ಪ್ರತ್ಯಕ್ಷ ಮಹಾಯೋಗಿಯಾಗಿದ್ದರೂ ಅವರ ನುಡಿಯಂತೆ
ವು ಮಹಾ ಪುರುಷರನ್ನು ಎಷ್ಟರಮಟ್ಟಿಗೆ ಮನ್ನಿಸುತ್ತಿದ್ದನೆಂಬುದು ಗೊತ್ತಾಗು
. ಅವರು ಒಂದು ಕೆಟ್ಟಕಾರ್ಯವನ್ನು ಮಾಡಿದರೂ ಅವರ ಆಜ್ಞಾಧಾರಕನಾಗಿ
ನು ಅದನ್ನು ಮಾಡಿಬಿಡುವೆನು.—ಎನ್ನುವಷ್ಟು ಪ್ರೀತಿಯು ಅವನಿಗೆ ಶರಣರಲ್ಲಿತ್ತು.
ರ ತತ್ವವನ್ನು ಸವಿಯಲು ಅವರ ನುಡಿಗಳೇ ಅವನ ನಡೆಗಳಾಗಿರಲೇಬೇಕು.
ರ್ಹಿಗಳೆಲ್ಲರಿಗೂ ಇಂದು ಮಹಾತ್ಮ ಗಾಂಧೀಜಿಯವರ ನುಡಿ ನಡೆಗಳೇ ನಡತೆ
ಾಗಿವೆ. ಅವರು ಅವುಗಳನ್ನು ಮೀರಿದಂತೆ ನಡೆದರೆ ಮಾತ್ರ ಆ ಧರ್ಮದ ಅನು
ಾಯಿಗಳಾಗುವರು. ಇಲ್ಲವಾದರೆ ಆ ಸತ್ಯದ ಬೆಳಕಿನಲ್ಲಿ ವಾಸಿಸುವುದೂ ಕೂಡ
ರವಾಗುವುದು ಮಹಾತ್ಮರ ಪ್ರತಿ ನುಡಿಯೂ ಅವರ ಹಿಂಬಾಲಕರಾದ ಮಾನವ
ಲ್ಲಾ ಜೀವನದ ಹೆಗ್ಗುರಿಗಳಾಗುವುವು.

ಬಸವೇಶ್ವರನು ಶರಣರನ್ನು ಎಷ್ಟರಮಟ್ಟಿಗೆ ನಿಷ್ಕಾಮ ದೃಷ್ಟಿಯಿಂದ ನಡೆಯು
ದ್ದನೆಂಬುದು ಈ ವಚನದಿಂದ ತಿಳಿದು ಬರುತ್ತದೆ. "ನಿಮ್ಮ ಶರಣರು ಕದಿಯಲು
ಾದಟರೂ ಕನ್ನ ಹಾಕುವ ಉಳಿಯನ್ನು ಹಿಡಿದುಕೊಂಡು ಸಹಾಯಕನಾಗಿ ಹೊರ
ವೆ ಸೆರೆಮನೆಗೆ ಹೊರಟರೂ ಹೇಡಿಯಾಗಿ ಹೆದರಿ ಹಿಂಜರಿಯದೆ ಅವರಿಗಿಂತ
ುಂದೆ ಹೋಗುವೆ. ಇದಕ್ಕೆ ಹೆದರಿ ಶಂಕೆಗೊಂಡರೆ ನಿನ್ನ ಹಾಗೂ ಶರಣರ ಆಣೆ
ರಲಿ ನನ್ನ ಒಡೆಯರ ನಡತೆಯೇ ಸದಾ ಜೀವನಿಗೆ ಆಚರಿಸಲು ಯೋಗ್ಯವಾದ
ಡತೆಯೆಂದು ತಿಳಿಯದಿದ್ದರೆ ಅವರ ಸೇವಕನಾದವನು ಉತ್ತಮನಾಗುವುದು ಬಹು
ಷ್ಟವಾಗುವುದು." ಎಂದು ಪರಮಾತ್ಮನಿಗೆ ಹೇಳಿರುವನು.

## ಮಹಾದೇವಿಯಕ್ಕನ ವಚನಗಳು.

ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ, ತನ್ನ ನೂಲು ತನ್ನ
ುತ್ತಿ ಸಾವ ತೆರನಂತೆ, ಮನ ಬಂದುದ ಬಯಸಿ ಬೇವುತ್ತಿದ್ದೇನೆ. ಅಯ್ಯ! ಎನ್ನ
ುನದ ದುರಾಶೆಯ ಮಾಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ.

# ಬಸವೇಶ್ವರರ ಅಹಿಂಸಾ ತತ್ವ

ಶ್ರೀ ತ. ಕು. ಶಂಕ

"ದಯವೇ ಧರ್ಮದ ಮೂಲವಯ್ಯ" ಎಂದು ಭೋಧಿಸಿದರು ಬಸವ
ವರು. ಈ ಭೋಧನೆಯಲ್ಲಿ ವಿಶ್ವಧರ್ಮದ ತತ್ವವೇ ಅಡಕವಾಗಿದೆ. ಶ್ರವಣ ಪ
ಕೆಯ ಧರ್ಮಗಳು "ಅಹಿಂಸೆಯೇ ಶ್ರೇಷ್ಠ ಧರ್ಮ" (ಅಹಿಂಸಾ ಪರಮೋಧವ
ಎಂದು ಹೇಳಿ ಅಹಿಂಸೆಯ ಅಗಾಧ ಸ್ವರೂಪವನ್ನು ಒತ್ತಿ ಹೇಳಿದವು. "ಹಿಂಸೆವ
ಬೇಡಿ" ಎಂಬ ಮಾತಿನ ಅರ್ಥ 'ಸಮತೆ'.. ಮಹಾವೀರರು ಹೇಳಿದಂತೆ, "ಎಲ್ಲ
ಗಳು ಜೀವಿಸಲು ಇಚ್ಛಿಸುತ್ತವೆ; ಸಾಯಲು ಯಾರೂ ಇಚ್ಛಿಸುವುದಿಲ್ಲ; ಆದುದ
ಪ್ರಾಣಿವಧೆಯು ಘೋರ ಪಾಪ. ನಿನಗೆ ದುಃಖವು ಪ್ರಿಯವಾಗಿಲ್ಲ; ಯ
ಜೀವಿಗೂ ಅದು ಪ್ರಿಯವಾಗಿಲ್ಲ; ಇದನ್ನು ತಿಳಿದು, ಎಲ್ಲ ಜೀವಿಗಳನ್ನು ನಿನ್ನಂತೆ ಸ
ಧಾನ ಪೂರ್ವಕವಾಗಿ ದಯೆಯಿಂದ ಕಾಣು. ಭಗವಾನ್ ಬುದ್ಧನು ಸಹ, "ಅಹಿ
ಪ್ರಾಣಿದಯೆ" ಇವು ತಾನು ಭೋಧಿಸಿದ ಧರ್ಮದ ತಳಹದಿ ಎಂದು ಸಾರಿದನು.

"ಮಾ ಹಿಂಸ್ಯಾತ್ ಸರ್ವ ಭೂತಾನಿ" ಎಂದು ವೇದಗಳು ಘೋಷಿಸಿದರ
ಯಜ್ಞಯಾಗಾದಿಗಳಲ್ಲಿ ಪ್ರಾಣಿಹಿಂಸೆಯು ವಿರೋಧವಿಲ್ಲದೆ ಸಾಗಿತ್ತು. ಮಾನ
ಜೀವನವು ಅಧೋಗತಿಯತ್ತ ಒಲಿದಿತ್ತು. ಜ್ಞಾನಿಗಳೇ ದೇವ-ಧರ್ಮಗಳ ಹೆಸರಿ
ಪ್ರಾಣಿವಧೆ ಮಾಡುತ್ತಿದ್ದರೆ, ಸಾಮಾನ್ಯ ಮನುಷ್ಯನಿಗೆ ಅವರ ಆಚರಣೆಯೇ ವ
ಭಾಷೆಯಾಗಿತ್ತು. ಇಂಥ ಸಮಯದಲ್ಲಿ ಮಹಾವೀರ ಮತ್ತು ಬುದ್ಧ ಇವರು ಜನ
ಜೀವದ ಪವಿತ್ರತೆಯನ್ನು ಎತ್ತಿ ತೋರಿಸಿ, ದಯಾಧರ್ಮದ ಅವಶ್ಯಕತೆಯನ್ನು ತಮ
ಸಿದ್ಧಾಂತಗಳ ಮುಖಾಂತರವಾಗಿ ಸ್ಪಷ್ಟಪಡಿಸಿದರು. ತತ್ವವು ಕೇವಲ ಸಿದ್ಧಾಂತವಾ
ಉಳಿಯಬಾರದು. ಅದು ಆಚರಣೆಯಲ್ಲಿ ಬಂದಾಗ ಮಾತ್ರ ಮಾನವನಿಗೆ ಅದ
ಸಾರ್ಥಕತೆಯ ಫಲ ದೊರೆಯುತ್ತದೆ. ಅಹಿಂಸೆಯು ಪುರಾಣದ ಮಾತಾಗದೆ ಜೀ
ನದ ಉಸಿರಾಗಬೇಕು.

ಯಜ್ಞಯಾಗಗಳಲ್ಲಿ ಆಗುತ್ತಿದ್ದ ಹಿಂಸೆಯನ್ನು ಅರಿತ ಬಸವೇಶ್ವರರು, ಆ ಬ
ಅತಿ ಮಾರ್ಮಿಕವಾಗಿ ತಮ್ಮ ವಿರೋಧವನ್ನು ವ್ಯಕ್ತಪಡಿಸಿದ್ದಾರೆ:

"ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ
ಹೋತೇ ಅಳುಕಂಡ್ಯಾ, ವೇದವ ನೋದಿದವರ ಮುಂದೆ

ಅಳು ಕಂಡ್ಯಾ, ಶಾಸ್ತ್ರವ ಕೇಳಿದವರ ಮುಂದೆ ಅಳು
ಕಂಡ್ಯಾ, ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ"

ಇಲ್ಲಿರುವ ಭಾವನೆಗಳು ಬಹು ವಿಧವಾಗಿವೆ: ಪ್ರಾಣಿಯ ಬಗ್ಗೆ ಕನಿಕರ, ವೇದವ ನೋದಿ ಹಿಂಸೆ ಮಾಡುವವರ ಅಜ್ಞಾನ, ಕ್ರೂರತನದ ಬಗ್ಗೆ ನಿಷ್ಠುರತೆ; ಮೂಕ ಪ್ರಾಣಿಗಳನ್ನು ಧರ್ಮದ ಹೆಸರಿನಲ್ಲಿ ಕೊಂದರೆ, ಪ್ರಾಣಿಗಳಿಗೆ ದೇವರೇ ಗತಿ; ಈ ರೀತಿ ಪ್ರಾಣಿದಯೆಯ ಸಿದ್ಧಾಂತವೇ ಈ ವಚನದಲ್ಲಿ ಅಡಕವಾಗಿದೆ.

"ದಯವಿಲ್ಲದ ಧರ್ಮವದಾವುದಯ್ಯಾ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ.
ದಯವೇ ಧರ್ಮದ ಮೂಲವಯ್ಯಾ:
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ"

ದಯೆಯು ಮಾನವತೆಯ ಕುರುಹು; ಅಂತೆಯೇ ಅದಕ್ಕೆ ಜೀವನದಲ್ಲಿ ಅಗಣಿತ ಬೆಲೆ ಯುಂಟು. ಪಶುಗಳು ಕೂಡ ದಯೆಯಿಂದ ವರ್ತಿಸುವಾಗ, ಮಾನವನು ಮಾನವತೆ ಯನ್ನು ಮರೆತರೆ ಧರ್ಮವು ಉಳಿಯುವುದೆಂತು? ದಯೆಯು ಎಲ್ಲ ಧರ್ಮಗಳ ತಳ ಹದಿ. ಮಾನವನು ಆತ್ಮನ ಸ್ವರೂಪವನ್ನು ಅರಿಯಲು ದಯಾವಂತನಾಗಿ ಜೀವಿಸ ಬೇಕು. ತನ್ನಲ್ಲಿರುವ ಆತ್ಮನಂತೆ ಉಳಿದ ಜೀವಿಗಳಲ್ಲಿಯೂ ಆತ್ಮನಿಹನೆಂದು ನಂಬ ಬೇಕು; ನಂಬುಗೆಯಂತೆ ಆಚರಿಸಬೇಕು. ಎಲ್ಲ ಧರ್ಮಗಳೂ ಈ ತತ್ವವನ್ನು ಸಾರಿವೆ ಹೀಗಿದ್ದರೂ ಮೂಢನಂಬಿಕೆಯಿಂದ ಹಿಂಸೆ ಮಾಡುವುದು ಸಾಮಾಜಿಕ ಇತಿಹಾಸದಲ್ಲಿ ಕಂಡು ಬರುತ್ತಿರುವ ಒಂದು ನಿರಾಶೆಯ ಘಟನೆ. ಅಮೃತಚಂದ್ರ ಸೂರಿಜಿಯವರು ಹಿಂಸೆಯ ವ್ಯಾಖ್ಯೆಯನ್ನು ಹೀಗೆ ಹೇಳಿದ್ದಾರೆ:—

"ಯತ್ ಖಲು ಕಷಾಯಯೋಗಾತ್ ಪ್ರಾಣಾನಾಂ
ದ್ರವ್ಯಭಾವ ರೂಪಾಣಾಮ್।
ವ್ಯಪರೋಪಣಸ್ಯ ಕಾರಣಂ ಸುನಿಶ್ಚಿತಾ ಭವತಿ ಸಾ ಹಿಂಸಾ॥

ಕ್ರೋಧ, ಲೋಭ, ಮಾನ, ಮಾಯೆ, ದ್ವೇಷ ಇತ್ಯಾದಿ ಕಷಾಯಗಳು ಮನುಷ್ಯ ನನ್ನು ದುಷ್ಕಾರ್ಯಕ್ಕೆ ಎಳೆಯುತ್ತವೆ. ಯಾವುದಾದರೊಂದು ಕಷಾಯದಿಂದ ಯುಕ್ತನಾಗಿ ಪ್ರಾಣಿಯ ಶರೀರ, ಭಾವ, ಚೇತಕ್ಕೆ ಆಘಾತವನ್ನುಂಟುಮಾಡುವುದೇ ಹಿಂಸೆ. ಇಂಥ ಆಘಾತದಿಂದ ವೇದನೆ ಉಂಟಾಗಬಹುದು, ಅಥವಾ ಪ್ರಾಣಹಾನಿ ಯಾಗಬಹುದು. ಕೋಪದಿಂದ ಮಾತಾಡಿದರೆ ತನಗೂ ಹಿಂಸೆ, ಪರರಿಗೂ ಹಿಂಸೆ ಕೋಪಿಷ್ಠನು ತನ್ನತನವನ್ನು ಮರೆತು ಪರರಿಗೆ ನೋವನ್ನುಂಟುಮಾಡುತ್ತಾನೆ. ಬಸ ವಣ್ಣನವರು ಇದೇ ಮಾತನ್ನು ಹೀಗೆ ಹೇಳಿದ್ದಾರೆ:—

"ತನುವಿನ ಕೋಪ ತನ್ನ ಹಿರಿತನದ ಕೇಡು!
ಮನದ ಕೋಪ ತನ್ನರುಹಿನ ಕೇಡು"

ಕೋಪದಿಂದ ಮನುಷ್ಯನು ತನ್ನ ಹಿರಿತನಕ್ಕೂ, ಅರುಹಿಗೂ (ತಿಳುವಳಿಕೆಗೂ) ಕೇಡನ್ನುಂಟು ಮಾಡಿಕೊಳ್ಳುತ್ತಾನೆ. ಆತ್ಮನ ಉನ್ನತಿಗೆ, ಆತ್ಮನ ಸ್ವರೂಪಜ್ಞಾನ ಅವಶ್ಯ ಕಷಾಯಗಳ ನಿರ್ಮೂಲನವೇ ಆತ್ಮನ ಉನ್ನತಿಗೆ ಸಾಧನ. ಕೋಪದಿಂದ ಕೋಪಿಯು ತನ್ನ ಹಿರಿತನವನ್ನೇ ಹಾಳುಮಾಡಿಕೊಳ್ಳುತ್ತಾನೆ; ತನ್ನ ಅರುಹಿನ ಜ್ಯೋತಿಯನ್ನು ಆರಿಸುತ್ತಾನೆ. ಪರರಿಗೆ ವೇದನೆಯನ್ನು ಉಂಟುಮಾಡುವ ಪೂರ್ವದಲ್ಲಿ ತನ್ನಲ್ಲಿರುವ ಅಮೂಲ್ಯವಾದ ಹಿರಿತನ, ಅರುಹು—ಇವೆರಡನ್ನೂ ಕುಂದಿಸುತ್ತಾನೆ.

ಹಿಂಸೆಯು ಎರಡು ಬಗೆಯುದು: ಪ್ರಾಣಹಿಂಸೆ ಮತ್ತು ದ್ರವ್ಯಹಿಂಸೆ, ಪ್ರಾಣವೆಂದರೆ, ಜೀವ, ಸತ್ವ, ಶಕ್ತಿ, ಜೀವದ ಲಕ್ಷಣಗಳು ಚೈತನ್ಯ, ಶಾಂತಿ, ಸುಖ, ಶಕ್ತಿ ದ್ರವ್ಯವೆಂದರೆ ಪಂಚೇಂದ್ರಿಯಗಳು, ಮಾತು, ಮನಸ್ಸು, ಶ್ವಾಸೋಚ್ಛ್ವಾಸ, ಆಯುಷ್ಯ. ಎಲ್ಲ ಜೀವಿಗಳಿಗಿರುವ ಲಕ್ಷಣಗಳಿವು ಇವುಗಳಲ್ಲಿ ಯಾವುದೊಂದು ಪ್ರಾಣಕ್ಕೆ ವೇದನೆ, ಘಾತ, ಅಘಾತವಾದರೆ ಅದು ಪ್ರಾಣಹಿಂಸೆ ಬಾಹ್ಯದಲ್ಲಿ ಗೋಚರವಾಗುವ ಯಾವುದೊಂದು ಅವಯವ ಅಥವಾ ಶಕ್ತಿಗಳಿಗೆ ವೇದನೆಯಾದರೆ ಅದು ದ್ರವ್ಯಹಿಂಸೆ ಯಾವ ರೀತಿಯಿಂದಲೂ ಹಿಂಸೆಯಾಗದಂತೆ ವರ್ತಿಸಬೇಕಾದರೆ ದಯೆ, ಅನುಕಂಪ ಇವು ಅವಶ್ಯ, ಕೋಪ, ದ್ವೇಷ ಮೊದಲಾದ ಕಷಾಯಪ್ರೇರಿತನಾದ ವ್ಯಕ್ತಿಯು ಮೊದಲು ತನ್ನ ಆತ್ಮನ ನಿಜಸ್ವರೂಪಕ್ಕೆ ಚ್ಯುತಿತಂದುಕೊಳ್ಳುತ್ತಾನೆ; ಅದು ಆತ್ಮಹಿಂಸೆ. ಅದೇ ಕಾಲಕ್ಕೆ ಮನಸ್ಸಿನಲ್ಲಿದ್ದ ಕೋಪ ಅಥವಾ ದ್ವೇಷ ಕ್ರಿಯಾರೂಪಕ್ಕೆ ಇಳಿದಾಗ, ಮಾತಿನಿಂದ ಅಥವಾ ಕೃತಿಯಿಂದ ಪರರಿಗೆ ಹಿಂಸೆಯಾಗಬಹುದು. ಅದು ಪರಹಿಂಸೆ. ದಯಾವಂತನಾದವನು ಯಾವ ಪಾಪವನ್ನೂ ಮಾಡನು:

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,
ತನ್ನ ಬಣ್ಣಿಸಬೇಡ. ಇದಿರ ಹಳಿಯಲು ಬೇಡ.
ಇದೇ ಅಂತರಂಗಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ".

ಇಲ್ಲಿ ನಮೂದಿಸಿದ ಬಾಹ್ಯ ಮತ್ತು ಆಂತರಿಕ ಕ್ರಿಯೆಗಳು ಒಂದಿಲ್ಲೊಂದು ಕಷಾಯ ಪ್ರೇರಿತವಾದುದರಿಂದ, ಅಂಥ ಕಷಾಯದಿಂದ ಆಗುವ ಹಿಂಸೆಯು ಆಂತರಿಕ ಮತ್ತು ಬಹಿರಂಗ ಶುದ್ಧಿಯನ್ನು ನಾಶಪಡಿಸುತ್ತವೆ. ಕಳ್ಳನು, ಲೋಭಿಯು, ಪರರ ವಸ್ತು ಪಡೆಯಲು ಹವಣಿಸುವರು: ಲೋಭದಿಂದ ಆತ್ಮಮಲಿನತೆಯು ಉಂಟಾಗುತ್ತದೆ. ಪರರ ವಸ್ತು ಹರಣ ಮಾಡುವುದರಿಂದ, ವಸ್ತುವಿನ ಯಜಮಾನನಿಗೆ ಮಾನಸಿಕ ಹಿಂಸೆ

ಕೊಲೆಗಡಕನು ಕೋಪೋದ್ರಿಕ್ತನಾದಾಗ
ುತ್ತು ಬಹಿರಂಗ ಹಾನಿಯಾಗುತ್ತವೆ. ಕೊಲೆಗಡಕನು ಕೋಪೋದ್ರಿಕ್ತನಾದಾಗ
ನ್ನನ್ನೇ ಮರೆತುಬಿಡುತ್ತಾನೆ. ಕೊಲೆಯಾದ ಪ್ರಾಣಿಯು ಅನಂತವೇದನೆ, ದುಃಖ
ವನ್ನು ಅನುಭವಿಸಿ, ಕೊಲೆಗಡಕನ ಕ್ರೌರ್ಯಕ್ಕಾಗಿ ಶಪಿಸುತ್ತದೆ ಹುಸಿ ನುಡಿ
ಯುವವನು ಸತ್ಯವನ್ನು ಬಚ್ಚಿಡಲು ಯತ್ನಿಸುತ್ತಾನೆ. ಲೋಭದಿಂದಲೋ, ಮಾಯೆ
ಯಿಂದಲೋ ಯುಕ್ತನಾಗಿ ಅಸತ್ಯ ನುಡಿಯುತ್ತಾನೆ. ಅಸತ್ಯದ ಪರಿಣಾಮ ಹುಸಿ
ನುಡಿಯುವವನ ಮೇಲೆ ಮೊದಲು ಆಗುತ್ತದೆ. ಅವನು ನುಡಿದ ಹುಸಿಯಿಂದ ಪರ
ರಿಗೆ ಹಾನಿಯಾಗಬಹುದು ಅಥವಾ ಆಗದಿರಬಹುದು. ಈಗಾಗಲೇ ವಿವರಿಸಿದಂತೆ
ಮುನಿದರೆ ಮನಸ್ಸಿಗೆ ಆಘಾತವಾಗುತ್ತದೆ. ರಕ್ತ ಚಲನೆಯು ಏರುತ್ತದೆ. ಮನಸ್ಸಿನ
ಪ್ರಜ್ಞಾ ಭಾವವು ಅಳಿಯುತ್ತದೆ. ಆದುದರಿಂದ ಬಸವಣ್ಣನವರು "ಮುನಿಯಬೇಡ"
ಎಂದ ಹೇಳಿದರು. ಅನ್ಯರಿಗೆ "ಅಸಹ್ಯ ಪಡಬೇಡ"—ಇದೊಂದು ನಿರ್ದಯತೆಯ
ಗುರುತು. ಪರರಲ್ಲಿರುವ ವಿದ್ರೂಪತೆ, ಕುರೂಪತೆ, ಅಂಗಹೀನತೆ, ಬಡತನ, ಬವ
ಣೆಯಿಂದ ತೋರುವ ಅರವೈಯತೆ ಅಥವಾ ಬಿತ್ತಲಿ ಸ್ವರೂಪ—ಇವುಗಳಿಂದ ಮನಸ್ಸಿ
ನಲ್ಲಿ ತಿರಸ್ಕಾರ ಭಾವನೆಯಾದರೆ, ಹೃದಯದಿಂದ ಅನುಕಂಪವೇ ಮಾಯವಾಗಿದೆ
ಯೆಂದು ಭಾವಿಸಬೇಕು. ತನ್ನನ್ನು ಬಣ್ಣಿಸುವವನು. ಮಾನ ಕಷಾಯದಿಂದ
ಪ್ರೇರಿತನಾಗಿರುತ್ತಾನೆ. ತನ್ನ ನಿಜವಾದ ಅಥವಾ ಕಾಲ್ಪನಿಕ ಶ್ರೇಷ್ಠತೆಯನ್ನು ವರ್ಣಿ
ಸುವಾಗ ಹುಸಿಮಾತುಗಳೂ ಕೂಡಬಹುದು. ಅನ್ಯರನ್ನು ಹಳಿಯುವಾಗ ದ್ವೇಷ
ಅಥವಾ ಕ್ರೋಧದಿಂದ ಕೂಡಿದ ಮನುಷ್ಯನು ಅವರಿಗೆ ಮಾನಸಿಕ ವೇದನೆಯನ್ನುಂಟು
ಮಾಡುತ್ತಾನೆ. ಅಪಮಾನದ ಅನ್ಯಾಯವನ್ನು ಅನುಭವಿಸುವ ಮಾನವನು ತನ್ನ
ಸುಖ, ಶಕ್ತಿಗಳನ್ನು ಕಳೆದುಕೊಂಡು ಗೋಳಿಡುತ್ತಾನೆ. ಇಲ್ಲವೆ ಅವನೂ ಕೋಪಿಷ್ಠ
ನಾಗಿ ಪ್ರತೀಕಾರಕ್ಕೆ ಇಳಿಯುತ್ತಾನೆ ಆದುದರಿಂದ ಅಂತರಂಗ ಬಹಿರಂಗ ಶುದ್ಧಿ
ಬಯಸುವವನು ಕಷಾಯಗಳಿಂದ ಮುಕ್ತನಾಗಿರಬೇಕು; ಹಿಂಸೆಯಿಂದ ದೂರ ಉಳಿ
ಯಬೇಕು

ಹಿಂಸಕನೇ ನಿಜವಾದ ಹೊಲೆಯನೆಂದು ಬಸವಣ್ಣನವರ ಮತ. ಹುಟ್ಟಿದ
ಕುಲಕ್ಕಿಂತ ಬೆಳೆಸಿಕೊಂಡ ಗುಣಗಳೇ ಮನುಷ್ಯನ ಉನ್ನತಿಗೆ ಕಾರಣ; ಅಂತರಂಗ
ಶುದ್ಧಿಗೆ ಮೂಲ.

"ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ,
ಕುಲವೇನೋ ಅವಂದಿರ ಕುಲವೇನೋ ? ಸಕಲ ಜೀವಾತ್ಮರಿಗೆ
ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು"

ಸಕಲ ಜೀವಾತ್ಮರಿಗೆ ಲೇಸನೇ ಬಯಸುವವನು ವಿಶಾಲಹೃದಯದವನಾಗಿರಬೇಕು,
ಗುಣ ಗ್ರಾಹಿಯಾಗಿರಬೇಕು, ಅನುಕಂಪದಿಂದ ಕೂಡಿರಬೇಕು. ಸರ್ವರಿಗೂ ಸುಖ
ವಾಗಲಿ ಎಂಬ ಶುದ್ಧ ಭಾವನೆ, ಆಶೆ ಆಕಾಂಕ್ಷೆಗಳಿಂದ ಕೂಡಿದವನಾಗಬೇಕು. ಅರು
ಣೋದಯವು ಎಲ್ಲ ಜೀವಿಗಳ ಚಿತ್ತಕ್ಕೆ ಹೊಸ ಚೈತನ್ಯವನ್ನು ತರುವಂತೆ, ವಿಶಾಲ
ಹೃದಯವುಳ್ಳವನು ಸಕಲ ಜೀವಾತ್ಮರಿಗೆ ಲೇಸನ್ನು ಬಯಸುತ್ತಾನೆ.

ಆಹಾರದಲ್ಲಿ ಶುದ್ಧತೆ ಇರಬೇಕು. ಪ್ರಾಣಿಹಿಂಸೆ ಮಾಡದೆ ಮಾಂಸಾಹಾ
ದೊರೆಯದು. ಕೊಂದು ಮಾದಿಗನಾಗಬೇಕು, ಹೊಲಸು ತಿಂದು ಹೊಲೆಯನಾ
ಬೇಕು. ಆಹಾರ ಶುದ್ಧಿಯು ಸಾತ್ವಿಕ ಜೀವನದ ಜೀವಾಳ; ತಾಮಸ ವೃತ್ತಿ
ಬೆಳೆಯಲು "ಹೊಲಸು" ಆಹಾರವೇ ಬಹುಮಟ್ಟಿಗೆ ಕಾರಣವೆಂದು ಹೇಳಬಹುದು.

ಅಹಿಂಸೆಯು ಕೇವಲ ತತ್ವವಾಗಿ ಉಳಿಯಬಾರದು; ಮಾತಿನಲ್ಲಿ ಮೂಡಿ
ಬೇಕು, ಕೃತಿಯಲ್ಲಿ ಕಾಣಬೇಕು. ಆಂದಾಗ ಮಾತ್ರ ಮನುಷ್ಯನು ಚಾರಿತ್ರ್ಯವ
ನಾಗುತ್ತಾನೆ. ಬಸವಣ್ಣನವರು, "ನಮ್ಮ ಕೂಡಲಸಂಗಮದೇವನ ಶರಣರು ಕಾ
ವಿರಹಿತರು, ಶರಣ ಸನ್ನಿಹಿತರು, ಅನುಪಮ ಚರಿತ್ರರು" ಎಂದು ಹೇಳಿ ಕರ್ಮ
ಕ್ರಿಯೆಗಳಲ್ಲಿ ನಿರತರಾಗದೆ. ಚಾರಿತ್ರವಂತರಾದವರೇ ನಿಜವಾದ ಶರಣರೆಂದು ತ
ಸ್ಪಷ್ಟ ಮತವನ್ನು ವ್ಯಕ್ತಪಡಿಸಿದ್ದಾರೆ. "ವೇದವನೋದಿದರೇನು? ಶಾಸ್ತ್ರವ ಕೇಳಿ
ರೇನು? ಜಪತಪವ ಮಾಡಿದರೇನು?" ಅಂತರಂಗ-ಬಹಿರಂಗ ಶುದ್ಧಿ ಇಲ್ಲದವ
ಕುಲಜನಾಗನು.

ತುಳಸೀದಾಸರು ಸಹ ದಯವೇ ಧರ್ಮದ ಮೂಲವೆಂದು ಮನಮುಟ್ಟು
ರೀತಿಯಲ್ಲಿ ಹೇಳಿದ್ದಾರೆ

"ದಯಾ ಧರ್ಮಕಾ ಮೂಲ ಹೈ, ಪಾಪಮೂಲ ಅಭಿಮಾನ।
ತುಲಸೀ ದಯಾನ ಛೋಡಿಯೆ, ಜಬ ಲಗ ಘಟ ಮೇ ಪ್ರಾಣ॥

ಅಭಿಮಾನ, ದುರಭಿಮಾನ ಪಾಪಕ್ಕೆ ಮೂಲ. ದಯೆಯನ್ನು ಶರೀರದಲ್ಲಿ ಜೀವ
ರುವವರೆಗೆ ಬಿಡಬೇಡ—ಎಂದು ಸಾರಿದ್ದಾರೆ. ಅದರಂತೆಯೇ ವ್ಯಾಸಮುನಿಯು ಸ
ಪರರಿಗೆ ಲೇಸನ್ನು ಬಯಸುವುದೇ ಜೀವನದ ಸಾರ್ಥಕತೆ ಎಂದು ಸಾರಿದ್ದಾರೆ:

"ಅಷ್ಟಾದಶಪುರಾಣಾನಾಂ ವ್ಯಾಸಸ್ಯ ವಚನದ್ವಯಮ್।
ಪರೋಪಕಾರಃ ಹಿ ಪುಣ್ಯಾಯ ಪಾಪಾಯ ಪರಪೀಡನಮ್"॥

ಹದಿನೆಂಟು ಪುರಾಣಗಳ ಸಾರವನ್ನು ಎರಡು ವಚನಗಳಲ್ಲಿ ಅಡಗಿಸಿದ್ದಾರೆ, ವ್ಯಾಸರು
ಪರೋಪಕಾರದಿಂದ ಪುಣ್ಯವೂ, ಪರಪೀಡನೆಯಿಂದ ಪಾಪವೂ ಉಂಟಾಗುತ್ತವೆ.

ಬಸವಣ್ಣನವರ ವಚನಗಳು ಮಾನವ ಜೀವನದಲ್ಲಿ ಭಕ್ತಿಯೇ ಪವಿತ್ರ ಶಕ್ತಿ
ಎಂದು ಸಾರಿವೆ. ಮನಸ್ಸು ಸ್ವಾಭಾವಿಕವಾಗಿ ಅನೇಕ ಏರಿಳಿತಗಳಿಗೆ ಒಳಗಾಗುತ್ತದೆ.
ಜ್ಞಾನ, ಭಕ್ತಿಯಿಂದ ಪರಿಶುದ್ಧಿ ಪಡೆದರೆ ಮಾತ್ರ ಅಂತರಂಗ ಶುದ್ಧಿ ಸಾಧ್ಯವಾಗುವುದು
ಅಂತರಂಗ ಶುದ್ಧಿಗೆ ಧರ್ಮದ ಸಹಾಯ ಬೇಕು; ದಯೆಯು ಆಚಾರ ವಿಚಾರಗಳ
ತಳಹದಿಯಾಗಬೇಕು. ಆತ್ಮ ಕಲ್ಯಾಣ ಸಾಧಿಸಲು ಪರೋಪಕಾರವೂ ಒಂದು
ಸಾಧನ. ಪರಪೀಡನೆಯಿಂದ ದೂರ ಸರಿದು, ಅಹಿಂಸೆಯೇ ಸರ್ವಶ್ರೇಷ್ಠ ಧರ್ಮ
ವೆಂದು ತಿಳಿದು ಎಲ್ಲ ಜೀವಿಗಳನ್ನು ಅನುಕಂಪ, ಸಮಾನತೆ, ದಯೆಯಿಂದ ಕಾಣುತ್ತ
ಮನ—ವಚನ— ಕಾಯಗಳನ್ನು ನಿಯಂತ್ರಿಸಿ, ಕ್ಷಮಾ, ದಾನ, ಧ್ಯಾನಗಳನ್ನು ಆಚ
ರಿಸಿದರೆ ಪರಮ ಭಕ್ತಿಯನ್ನು ಸಾಧಿಸಲು ಸಾಧ್ಯ. (ಕೃಪೆ: ಬಸವ ಜರ್ನಲ್)

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ದಿನಾಂಕ 9–6–1985 ರಂದು ತಿಪಟೂರು ತಾಲ್ಲೂಕು ಬಿಳಿಗೆರೆ ಬಸವ ಜಯಂತಿಯನ್ನು ಆಚರಿಸಿದ ಪುಣ್ಯಗ್ರಾಮ. ಮಾದರಿ ಗ್ರಾಮವೆಂದೇ ಬಿಳಿಗೆರೆ ಪ್ರಸಿದ್ಧ. ಅದಕ್ಕಾಗಿ ಜೀವನವನ್ನೇ ಮುಡುಪಿಟ್ಟು ದುಡಿದವರು ದಿವಂಗತ ಶ್ರೀ ...ಂಬಣ್ಣನವರು ಶ್ರೀ ಸಿದ್ಧಗಂಗಾ ಮಠದ ಸಿಷ್ಯಾಮಂತರಲ್ಲೊಬ್ಬರು 'ಸಹಸ್ರಕ್ಕೊಬ್ಬ ...ಕ್ತ'–ಎಂಬ ಸೂಳ್ನುಡಿಗೆ ಉದಾಹರಣೆಯಾದವರು. ಅವರ ಹಾದಿಯಲ್ಲೇ ಮುನ್ನಡೆ ...ದವರು ಅವರ ಮಗ ಶ್ರೀ ಶಿವಣ್ಣನವರು ಅವರ ಬೆಂಬಲಕ್ಕಿದ್ದವರು ಪಟೇಲ್ ಶ್ರೀ ...ಹೊನ್ನಪ್ಪನವರು. ಬಿಳಿಗೆರೆ ಕಲ್ಪತರುಗಳ ಗ್ರಾಮ ಎಲ್ಲ 'ಉಳ್ಳವರು' ಅಲ್ಲಿ ಬಸವ ...ತತ್ವಗಳ ಪ್ರಸಾರ.

ಸಮಾರಂಭದಲ್ಲಿ ಲೋಕಸಭಾ ಸದಸ್ಯರಾದ ಶ್ರೀ ಜಿ. ಎಸ್. ಬಸವರಾಜುರವರು ...ಮಾತನಾಡುತ್ತ ಔತ್ತರೇಯ ಭಾರತೀಯರಿಗಿನ್ನೂ ಬಸವಣ್ಣನವರ ಪರಿಚಯ ಅವರ ...ತತ್ವಗಳ ಪರಿಚಯ ಆಗಿಲ್ಲ. ಲೋಕಸಭೆಯಲ್ಲಿ ಮೊಟ್ಟಮೊದಲ ಬಾರಿಗೆ ಬಸವಣ್ಣ...ನವರ ಪವಿತ್ರ ಪರಿಚಯ ಮಾಡಿಕೊಡುವ ಅವಕಾಶ ನನಗಾದುದು ನನ್ನ ಪುಣ್ಯ. ...23–4–85 ರಂದು ಬಸವ ಜಯಂತಿಯ ದಿನ ಲೋಕಸಭೆಯಲ್ಲಿ ಪ್ರಸ್ತಾಪಿಸಿದಾಗ ...ಅನೇಕರಿಗೆ ಬೆರಗು ಮೂಡಿತು. ಇಂದು ಪ್ರಚಾರದ ಅಭಾವದಿಂದ ಅಭಿಮಾನ ...ಶೂನ್ಯತೆಯಿಂದ ನಮ್ಮ ಧರ್ಮ, ನಮ್ಮ ಶರಣರು ಬೇಳಕಿಗೆ ಬರದಂತೆ ಆಗಿದೆ. ಆ ಉದ್ದೇಶದಿಂದಲೇ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಸ್ವಾಮಿಗಳು ಕರ್ನಾಟ...ಕದ ಉದ್ದಗಲಗಳಲ್ಲಿ ಸಂಚರಿಸುತ್ತ ಬಸವ ತತ್ವ ಪ್ರಚಾರದಲ್ಲಿ ತೊಡಗಿದ್ದಾರೆ. ಇದು ...ನಾಡಿನ, ಸಮಾಜದ ಪುಣ್ಯ ಈ ಪುಣ್ಯ ಕಾರ್ಯದಲ್ಲಿ ಭಾಗಿಗಳಾಗುತ್ತಿರುವವರೆಲ್ಲರೂ ...ಶ್ಲಾಘನೀಯರು–ಎಂದರು.

ಶರಣ ಸಂಗಮದರವರು ಮಾತನಾಡುತ್ತ, ಬಸವಣ್ಣ, ಚೆನ್ನಬಸವಣ್ಣ, ...ಗಂಗಾಂಬಿಕೆ, ನೀಲಾಂಬಿಕೆ, ಮಧುವರಸರು ಬ್ರಾಹ್ಮಣ ವರ್ಗದಿಂದ ಬಂದವರು. ...ಉಳಿದೆಲ್ಲ ಶರಣರು ಹಿಂದುಳಿದ ವರ್ಗದಿಂದ ಬಂದವರು. ವರ್ಗರಹಿತ್ಯ ಧರ್ಮ ...ಸಮಾಜವನ್ನು ಕಟ್ಟಿದವರು ಎಲ್ಲ. ಅವರು ಸಿದ್ಧಾಂತವನ್ನು ಕಂಡುಕೊಂಡು ಸುಮ್ಮ...ನಾಗಲಿಲ್ಲ ಅದನ್ನು ಪ್ರಯೋಗಕ್ಕೆ ಅಳವಡಿಸಿದರು. ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ...ಷಟ್‌ಸ್ಥಲ ದರ್ಶನ ಮಾರ್ಗ ತೆರೆದರು. ಅವರು ನೀಡಿದ 'ಅನುಭಾವ'ವೆಂಬುದು

Exchange of Spiritual expeirence ಆಯಿತು ಎಂಬುದಾಗಿ ಹೇಳಿದರು

ಶಿವಪಟ್ಟೂರಿನ ವಿದ್ವಾನ್ ಶ್ರೀ ಬಸವರಾಜಯ್ಯನವರು ಶಾಸನಗಳಲ್ಲಿ ಕಾಣಬರುವ ಬಸವಣ್ಣನವರನ್ನು ಕುರಿತು ಮಾತನಾಡಿದರು.

ಶ್ರೀ ಹೆಚ್. ವಿ. ವೀರಭದ್ರಯ್ಯನವರು ಮಣ್ಣಿನ ಮಕ್ಕಳು ಅದರಲ್ಲೂ ಗ್ರಾಮೀಣ ಗರತಿಯರು ತಮ್ಮ ಮುಗ್ಧ ಹೃದಯದ ಭಾವಗಂಧಗಾಳಿ ತುಂಬಿ ಹರಿಯಬಿಟ್ಟ ಹಾಡುಗಳಲ್ಲಿ ಅರಳಿದ ಬಸವಣ್ಣನವರನ್ನು ಕುರಿತು ಉಪನ್ಯಾಸ ಮಾಡಿದರು.

ಉಸಿರು ಎಷ್ಟು ಮುಖ್ಯವೋ ಅವಶ್ಯವೋ ಧರ್ಮವೂ ಅಷ್ಟೇ ಅವಶ್ಯ. We know the text of Basava but we donot know the context of Basava. ಇದು ಬಂದಿರುವ ದೌರ್ಭಾಗ್ಯ ಬಸವ ಧರ್ಮ ಇಂದು Applied Religion ಆಗಬೇಕಾಗಿದೆ. ಬಸವಣ್ಣನವರು ಕೇವಲ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳಿಗೆ ಧರ್ಮವನ್ನು ಮೀಸಲು ಮಾಡಲಿಲ್ಲ, ಅದರ ಸಾರವಾದ ಕಾಯಕ, ದಾಸೋಹ, ಸಕಲ ಜೀವ ಪ್ರೇಮವನ್ನು ಒತ್ತಿ ಹೇಳಿದರಲ್ಲದೆ ಅವುಗಳನ್ನು ಆಚರಣೆಗೆ ತಂದರು. ಅನುಸರಣೆ, ಅನುಷ್ಠಾನಗಳಿಗಿಂತ ಅನುಭಾವ ಶ್ರೇಷ್ಠವೆಂಬುದನ್ನು ಶರಣರು ಅರಿತರು. ಕೇವಲ ಅನುಷ್ಠಾನದಿಂದ ಕಾರ್ಯಕ್ಕೆ ಭಂಗ, ಕಾಯಕ ಮಾಡದ ಹೊರತು ಅನುಭಾವ ಅರ್ಥವಾಗದು ಅದು ಹೃದಯದ ಭಾಷೆ, ಹೃದಯದ ಬೇಕು ಅದರಿಂದ ಸಕಲ ಜೀವ ಪ್ರೇಮದರ್ಶನ ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀಗಳವರು ಅಧ್ಯಕ್ಷ ಪೀಠದಿಂದ ಆಶೀರ್ವಚನ ನೀಡಿದರು.

ರಾತ್ರಿ ಹತ್ತು ಘಂಟೆಗೆ ಜಗಜ್ಯೋತಿ ಬಸವೇಶ್ವರ ನಾಟಕ ಅಭಿನಯಿಸಿದ ಕಲಾಬಂಧುಗಳು ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರು. ಅದೊಂದು ಅಪೂರ್ವ ಅನುಭವ. ಬಸವ ಜಗತ್ತಿಗೆ ಗ್ರಾಮೀಣ ಬಂಧುಗಳನ್ನ ಕರೆದೊಯ್ಯುವ ವಿಸ್ಮಯ ಪ್ರಯತ್ನ, ಸಾರ್ಥಕ ಪ್ರಯತ್ನ. ಸುಮಾರು ಇಪ್ಪತ್ತು ಸಾವಿರ ಜನ ನಾಟಕ ನೋಡಿದರು. ಬೆಂಗಳೂರು–ಹೊನ್ನಾವರ ಹೆದ್ದಾರಿಯ ಸಂಪರ್ಕವೂ ಅಡ್ಡಿಯಾಗುವಷ್ಟು ಪ್ರೇಕ್ಷಕರ ಕಲಾ ಜಾತ್ರೆಯಾಯಿತು. ಹಾಲುಗೊಣದ ಮುದುಕಿಯೊಬ್ಬಳು ಹರಳಯ್ಯ–ಮಧುವಯ್ಯಗಳ ಕಣ್ಣು ಕೀಳಿಸಿದ ದೃಶ್ಯಕಂಡು ಮುಖಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳುತ್ತಿದ್ದರೆ, ಕಿಬ್ಬನಹಳ್ಳಿ ಕ್ರಾಸ್‌ನ ಹುಡುಗನೊಬ್ಬ "ಇದರ ಮುಂದೆ ಸಿನಿಮಾ ಏನೇನೂ ಅಲ್ಲ"–ಎನ್ನುತ್ತಿದ್ದ.

ನಾಟಕ ಮುಗಿದಾಗ ತೆಂಗಿನ ಗರಿಗಳ ಮಧ್ಯೆ ಬಂಗಾರದ ಬೆಳಕು ಮೂಡಿಬಂದು ಬಸವ ಸ್ಮರಣೆ ಇನ್ನೊಂದು ಗರಿ ಮೂಡಿಸಿತ್ತು. ●

